





# ಶ್ರೀ ಗುರು ರಾಘವೇಂದ್ರರು





[ ಬೆಲೆ : ರೂ. ೧.



# — ವಿಷಯಾನುಕ್ರಮಣಿಕೆ —

★





# ಶ್ರೀ ಗುರು ರಾಘವೇಂದ್ರರು






ಬರೆದವರು :

ಶ್ರೀ ಗು. ಸೀ. ಗುತ್ತಲ, ಹುಬ್ಬಳ್ಳಿ.




★


೧೯೫೫ ]　　　　[ ರೂ. ೧

ಮುದ್ರಕರು.

**ಶ್ರೀ ಕೆ. ಜಿ. ತಾಪಸ, B A**

ಸುಧಾ ಪ್ರಿಂ ಪ್ರೆಸ್,

ಹುಬಳೀಕರ ಬಿಲ್ಡಿಂಗ, ಹುಬ್ಬಳ್ಳಿ













ಪ್ರಕಾಶಕರು:

**ಗಂ. ಸೀ. ಗುತ್ತಲ**

ಮನೆ ನಂ. ೧೧೮೩ ಉಳ್ಳಾಗಡ್ಡಿ ಓಣಿ,

ಹುಬ್ಬಳ್ಳಿ.

# ಅಲ್ಪ ಪರಿಚಯ

*

**ದು**ಷ್ಟದಮನ ಹಾಗು ಶಿಷ್ಟಪಾಲನವೆಂಬ ಭಗವತ್ಕಾರ್ಯವು ಯಾವಾಗಿನಿಂದಲೂ ನಡೆದೇ ಇದೆ. ಈ ಪ್ರಪಂಚದಲ್ಲಿ ಈ ಕಾರ್ಯ ಸಾಧನೆಗಾಗಿ ಮಹಾಪುರುಷರೂ, ವಿಭೂತಿಗಳೂ ಆಗಿಂದಾಗ್ಗೆ ಅವತರಿಸಿ ಲೋಕೋದ್ಧಾರ ಮಾಡಿರುತ್ತಾರೆ ಹಾಗು ಮಾಡುತ್ತಲೂ ಇದ್ದಾರೆ. ಮಹಾ ವಿಭೂತಿಗಳ ಚರಿತ್ರೆಯು ಗಹನವಾಗಿರುವಂತೆ ಗೂಢವೂ ಆಗಿರುತ್ತದೆ.

ಈ ಪ್ರಪಂಚದಲ್ಲಿ ಪ್ರಹ್ಲಾದನ ಹೆಸರು, ಹಿರಿಮೆಗಳನ್ನು ಕೇಳದವರೇ ಇಲ್ಲ. ಎಲ್ಲರ ಮನೆಗಳಲ್ಲೂ, ಎಲ್ಲರ ಬಾಯಿಗಳಲ್ಲೂ ಅವನ ಆದರ್ಶ ಹೆಸರು ಮನೆಮಾತು. ಪ್ರಹ್ಲಾದನು ಪರಮಭಾಗವತಾಗ್ರೇಸರನು, ಮಹಾ ಅಹಿಂಸಾವಾದಿಯು ಮತ್ತು ಸತ್ಯಾಗ್ರಹ ಶಿರೋಮಣಿಯು. ಹಿಂಸೆ, ಬಲ, ಬಲಾತ್ಕಾರ ಹಾಗು ಅತ್ಯಾಚಾರಗಳನ್ನೆಲ್ಲ ತನ್ನ ಅಹಿಂಸೆಯಿಂದ ಮಣ್ಣುಗೂಡಿಸಿದ ಮಹಾತ್ಮನು. ವಿವಿಧಾನೇಕ ಶಸ್ತ್ರಾಸ್ತ್ರ ಆಯುಧಾದಿಗಳನ್ನೆಲ್ಲ ತನ್ನ ಸತ್ಯಾಗ್ರಹದಿಂದ ಸೋಲಿಸಿ ಸದೆಬಡೆದ ಶೂರ ಸತ್ಯಾಗ್ರಹಿಯು. ಅಸತ್ಯವನ್ನು ಸತ್ಯ ಹಾಗು ಸತ್ಯಾಗ್ರಹದಿಂದಲೂ, ಪರಸ್ಪರ ತಿಳುವಳಿಕೆ, ಪ್ರೇಮಗಳಿಂದಲೂ ಅಳಿಸಿ, ಸಿದ್ಧ ಮಾಡಿ, ಪ್ರಕಟಗೊಳಿಸಿ, ಮೆರೆಯಿಸಿದ ಸತ್ಯಸಂಧನು, ಪ್ರಹ್ಲಾದನು. ಸಾವಿನೊಡನೆಯೇ ಸೆಣಸಾಡಿ ಸಾಯಿಸಿದ ಅಮರ ಬಂಟನು.

ಸ್ವಾತಂತ್ರ್ಯವು ಮಾನವನ ಜನ್ಮಸಿದ್ಧ ಹಕ್ಕು ಹೌದು, ಅದು ಅವನ ಸ್ವತ್ತೂ ಹೌದು. ಒಳಗೆ ಧರ್ಮಕಾರಣವಿಲ್ಲದೇ ರಾಜಕಾರಣವು ಬಾಳಲಾರದು, ಬಾಳಿ ಬದುಕಲಾರದು. ದುಷ್ಟದಮನ ಹಾಗು ಶಿಷ್ಟಸಂರಕ್ಷಣೆಗೆ, ಧರ್ಮದಂಡ, ರಾಜದಂಡ ಇವುಗಳೆರಡೂ ಬೇಕು, ಅಗತ್ಯವಾಗಿ. ಧರ್ಮನೀತಿ, ರಾಜನೀತಿಗಳವು ಭಿನ್ನವಾಗಿರದೆ, ಒಂದೇ ಒಂದು ಪ್ರಪಂಚ ಕಲ್ಯಾಣ ನಾಣ್ಯದ ಎರಡು ಮೈಗಳಾಗಿವೆ. ಶ್ರೀಮಧ್ವಮತದುಗ್ಧಾಬ್ಧಿಗೆ ಚಂದ್ರನಂತಿರುವ

ಶ್ರೀ ವ್ಯಾಸರಾಯರು ವೈಷ್ಣವಲೋಕಕ್ಕೆ ನೀಡಿದ ಉಪಕಾರವು ದೊಡ್ಡದು ಧರ್ಮಕಾರಣವನ್ನೂ, ರಾಜಕಾರಣವನ್ನೂ ಸಮೀಚೀನವಾಗಿ ಸಮನ್ವಯ ಗೊಳಿಸಿ, ಶ್ರೀ ವಿದ್ಯಾರಣ್ಯರು ಸ್ಥಾಪಿಸಿದ ಶ್ರೀ ವಿಜಯನಗರ ಸಾಮ್ರಾಜ್ಯವನ್ನು ಆದರ್ಶ ರಾಮರಾಜ್ಯವೆಂದು ಮೆರೆಯಿಸಿದ ಮಹಾಯೋಗಿಗಳು ಇವರು ಒಳ್ಳೇ ವಿದ್ವಾಂಸರೂ, ರಾಜಕಾರಣಪಟುಗಳೂ, ಸಾಹಿತ್ಯ, ಸಂಗೀತ ಕಲಾಭಿಜ್ಞ ರಾಗಿದ್ದರಲ್ಲದೇ, ಒಳ್ಳೇ ಮತಸಹಾನುಭೂತಿಯುಳ್ಳವರಾಗಿದ್ದರು ಶ್ರೀ ವಿದ್ಯಾ ರಣ್ಯರನ್ನೂ ಹಾಗು ಈ ಶ್ರೀ ವ್ಯಾಸರಾಜರನ್ನೂ ಬಿಟ್ಟುಕೊಟ್ಟರ ಕರ್ನಾಟಕಕ್ಕೆ ಇತಿಹಾಸವೇ ಇಲ್ಲವೆನ್ನಬಹುದು. ಇವರ ಸಂಸ್ಕೃತ ಗ್ರಂಥಗಳಲ್ಲಿ ನ್ಯಾಯಾ ಮೃತ, ತರ್ಕತಾಂಡವ ಮತ್ತು ಚಂದ್ರಿಕೆಗಳು ಶ್ರೀ ವ್ಯಾಸತ್ರಯಗಳೆಂದು ಪ್ರಸಿದ್ಧಿ ಪಡೆದಿವೆ ೬೦ ವರ್ಷ ರಾಜ್ಯವಾಳಿ, ೮೫ ವರ್ಷ ಸಂನ್ಯಾಸಾಶ್ರಮ ಪಾಲಿಸಿ, ಲೋಕಸಂಗ್ರಹ ಸಾಧಕರಾಗಿ ಕ್ರಿ ಶ ೧೫೩೯ ರಲ್ಲಿ ಶ್ರೀಮನ್ನಾರಾಯಣಪರ ರಾದರು!

ಶ್ರೀಮದಾಚಾರ್ಯರ ಮತಸಿದ್ಧಾಂತ ತತ್ತ್ವಗಳನ್ನು ಸ್ವಮತೀಯರಿ ಗಲ್ಲದೇ ಪರಮತೀಯರಿಗೂ ಕೂಡ, ತೊಳೆತೊಳೆಯಾಗಿ ತಿಳಿಸಿಕೊಟ್ಟು ಶ್ರೀ ಮಾಧ್ವಕೀರ್ತಿಪತಾಕೆಯನ್ನು ಎತ್ತಿ ಮೇಲ್ಮುಖವಾಗಿ ಹಾರಿಸಿದ ಪರಮ ಹಂಸರೇ ಶ್ರೀ ರಾಘವೇಂದ್ರರು! ಸದಾ ಸತ್ಯ ಹಾಗು ಸದ್ಧರ್ಮಗಳಲ್ಲಿಯೆ ನಿರತ ರಾಗಿದ್ದುಕೊಂಡು ನಿಜಭಕ್ತಾದಿಗಳಿಗೆ ಪ್ರತ್ಯಕ್ಷ ಕಾಮಧೇನು, ಕಲ್ಪವೃಕ್ಷ, ಚಿಂತಾ ಮಣಿಗಳಾಗಿರುವಂಥ, ಪರಮದಯಾಳುಗಳು, ಕುಶಾಸ್ತ್ರ-ಕುಮತ-ಕುವಾದಗಳ ನ್ನೆಲ್ಲ, ತಮ್ಮ ಅಮೋಘ ವಾಕ್ಯವಾಣಿಗಳಿಂದ ಖಂಡಿಸಿ, ದೇಶದೇಶಾಂತರ ಗಳಲ್ಲೆಲ್ಲ, ಶಾಸ್ತ್ರಸಮ್ಮತ ಮತತತ್ತ್ವಗಳ ಪ್ರಚಾರಮಾಡಿ ಲೋಕೋದ್ಧಾರ ಮಾಡಿದ ವಾದೀಭಸಿಂಹರು ಶ್ರೀ ರಾಘವೇಂದ್ರರು. ಶ್ರೀ ವೈಷ್ಣವವೃಕ್ಷವನ್ನೇ ಎಲೆ-ಹೂ-ಕಾಯಿ-ಹಣ್ಣುಗಳಿಂದ ಸುಶೋಭಿತವಾಗಿ, ಕಂಗೊಳಿಸುವಂತೆ ಮಾಡಿದ ಮಹಾನುಭಾವರೇ ಶ್ರೀ ರಾಘವೇಂದ್ರರು! ಇವರು ರಚಿಸಿದ ಗ್ರಂಥ ಗಳು ಶ್ರೀ ಮಾಧ್ವಪಾರ ಪ್ರವಚನಗಳಿಗೆ ಒಳ್ಳೇ ಸುಲಲಿತ ಸೋಪಾನಗಳಾಗಿವೆ.

ಹೀಗೆ ಮೊದಲು ಪ್ರಹ್ಲಾದರಾಜರಾಗಿಯೂ, ಮುಂದೆ ಶ್ರೀ ವ್ಯಾಸರಾಜ ರಾಗಿಯೂ, ಆಮೇಲೆ ಶ್ರೀ ರಾಘವೇಂದ್ರರಾಗಿಯೂ ಅವತರಿಸಿ, ಶ್ರೀ ಭಗ

ಪತ್ನಾರ್ಯರ್ ಸಾಧಕರಾಗಿ ಲೋಕಕಲ್ಯಾಣ ಕಟ್ಟಿಕೊಂಡಿದ್ದಾರೆ, ಈ ಶ್ರೀ ರಾಘವೇಂದ್ರರು. ಇವರು ಸುಮಾರು ೪೭ ವರ್ಷಕಾಲ ಸಂನ್ಯಾಸಾಶ್ರಮವಹಿಸಿ, ಶ್ರೀ ಮಂತ್ರಾಲಯದಲ್ಲಿ ಶಾ. ಶ. ೧೫೯೩ ರಲ್ಲಿ ಸದೇಹರಾಗಿ ವೃಂದಾವನಸ್ಥರಾದರು! ಇವರು ವೃಂದಾವನಸ್ಥರಾಗಿ ಸುಮಾರು ೩೦೦ ವರ್ಷಗಳಾಗಿ ಹೋದಾಗ್ಯೂ ಇವರು ಇನ್ನೂ ಇವೊತ್ತಿನವರೆಗೂ "ಕರೆದಲ್ಲಿಗೆ ಬರುವವರೆಂ"ದು ಹೇಳಿದ ದಾಸೋಕ್ತಿಯಂತೆ, ಭಕ್ತಾದಿಗಳಿಗೆಲ್ಲ ಬಗೆಬಗೆಯ ಬೇಕು-ಬಯಕೆಗಳನ್ನೂ, ಚತುರ್ವಿಧ ಪುರುಷಾರ್ಥಗಳನ್ನೂ ಅನುಗ್ರಹಿಸುತ್ತ ಎಲ್ಲೆಲ್ಲಿಯೂ ಜಾಗ್ರತರಾಗಿ ಜೀವಂತರಾಗಿದ್ದಾರೆಂಬುದನ್ನು ಇಲ್ಲಿ ಹೇಳಬೇಕಾಗಿಲ್ಲ

ಇಂಥ ಅಗಾಧಮಹಿಮರನ್ನು, ಜ್ಞಾನಭಕ್ತಿ ತಪೋಮೂರ್ತಿಗಳನ್ನೂ ನಾನು ಈ ನನ್ನ ಬಾಲ ಲೆಕ್ಕಣಿಕೆಯಿಂದ ವರ್ಣಿಸುವದೆಂದರೆ, ನನ್ನಂಥ ಸಣ್ಣಬಾಯಿಗೆ ಅದೊಂದು ದೊಡ್ಡ ತುತ್ತೇ ಸೈ! ದೊಡ್ಡವರ ಗುಣಕೀರ್ತನವು ಅಲ್ಪವಾದರೂ, ಅದು ಮಹತ್ಫಲವೀಯುವದರಲ್ಲಿ ಸಂದೇಹವಿಲ್ಲ. ಏನೋ ಬಾಲಬುದ್ಧಿಗೆ ತೋಚಿದಷ್ಟು, ಏನೇನನ್ನೋ ಬರೆದಿರುತ್ತೇನೆ. ಹಂಸಕ್ಷೀರನ್ಯಾಯದಂತೆ ವಾಚಕರು ಇದರಲ್ಲಿಯ ಸಾರವನ್ನೇ ಗ್ರಹಿಸಬೇಕು. ಸಾಹಿತ್ಯಕನಾಗಬೇಕೆಂಬ ಅಭಿಲಾಷೆಯಿಂದ ಇದನ್ನು ಉಪಕ್ರಮಿಸಿದವನಲ್ಲ, ಹಾಗು ಬರೆದವನೂ ಅಲ್ಲ ಶ್ರೀ ಗುರುರಾಜರ ವಿಷಯವಾಗಿ ಹೆಚ್ಚೆಚ್ಚು ಭಕ್ತಿವಿಶ್ವಾಸಗಳು ಬೆಳೆಯಲು, ಬಲಿಯಲು, ಅನುಕೂಲವಾಗಲೆಂಬುವೇ ನನ್ನ ಉದ್ದೇಶವಾಗಿರುತ್ತದೆ. ವಿಭೂತಿಗಳ ಗುಣಗಾನದಿಂದಲೂ, ಅವರ ಮಹಿಮಾ ವಿಶೇಷಗಳಿಂದಲೂ, ಅವರಿಗಾಗಿ ಶ್ರದ್ಧೆ-ಭಕ್ತಿಗಳು ಹೆಚ್ಚಿ ಇನ್ನಿಷ್ಟು ಪುಷ್ಟಿಗೊಂಡು, ಅವುಗಳೇ ಮಾತ ನಮ್ಮನ್ನೆಲ್ಲ ಪೋಷಿಸುವದರಲ್ಲಿ ಸಂದೇಹವಿಲ್ಲ.

ಶ್ರೀ ಗುರುರಾಜರೇ ಒಡನುಡಿದ ಭವಿಷ್ಯವಾಣಿಯಂತೆ, ಅವರ ಯಶೋದೀಪವು, ಮನೆಮನೆಗಳಲ್ಲಿಯೂ, ಮಠಮಠಗಳಲ್ಲಿಯೂ, ದೆಸೆದಿಕ್ಕುಗಳಲ್ಲಿಯೂ, ಪ್ರಜ್ವಲಗೊಳ್ಳುತ್ತ ಪ್ರಚಲಿತವಾಗಿ, ಕೀರ್ತಿಕಿರಣಗಳಿಂದ ಬೆಳಗುತ್ತಲೇ ಇದೆ, ಪ್ರಪಂಚದಲ್ಲೆಲ್ಲ. ಅವರು ಮಾಡಿದ ಗ್ರಂಥಾದಿಗಳ ಆಯುಃಪರಿಮಿತಿಯು ೩೦೦ ವರ್ಷಗಳುಳ್ಳದ್ದು. ಅವರ ವೃಂದಾವನ ಮಹಾತ್ಮ್ಯೆಯು ೭೦೦ ವರ್ಷಗಳ ವರೆಗೆ ಅಚ್ಚಳಿಯದೆ ಮೆರೆಯುವಂತಹದೆಂದು ಅವರೇ, ಮೂವರು ಜ್ಯೋತಿಷಿ

ಗಳ ಜಾತಕಗಳ ವಿಷಯವಾಗಿ ತೆಗೆದ ಉದ್ಗಾರವಿದು ದಿನದಿನಕ್ಕೆ ಇವರ ವೃಂದಾವನ, ಮಠಗಳು ನಾಡುನಾಡುಗಳಲ್ಲಿ ಹೆಚ್ಚುತ್ತ ಅವರ ಮಹಿಮೆ ಕೀರ್ತಿಗಳೂ ದಿಗಂತವಾಗಿ ಹಬ್ಬತೊಡಗಿವೆ ಎಂದು ನಾನೇನು ಹೊಸದಾಗಿ ಹೇಳಬೇಕಾಗಿಲ್ಲ ಅಂಗೈಯಲ್ಲಿ ಕಾಣಿಸುತ್ತಿರುವದಕ್ಕೆ ಕನ್ನಡಿ ಏಕೆ? ಈ ನನ್ನ ಬಾಲಿಶ ಬುದ್ಧಿಗೆ ತಕ್ಕಂತೆ, ನನ್ನ ಅಲ್ಪ ಅಳಲಿಸೇವೆ ಸಲ್ಲಿಸಿದ್ದೇನೆ ಇದರಲ್ಲಿ ತಪ್ಪುತಡೆಗಳು ತುಂಬಿರಲು ಸಾಕು ಈ ಶ್ರೀಗುರು ಚರಿತ್ರೆಯು ನನ್ನ ಬುದ್ಧಿಗೆ ಮೀರಿದ್ದಾದರೂ, ನಾನು ಪ್ರಯತ್ನ ಮಾಡಿದ್ದೇನೋ ಸಿ... "ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋಭಯಾತ್" ಎಂಬಂತೆ ಇವರ ವಿಷಯವಾಗಿ ನಾನು ಪಟ್ಟ ಅಲ್ಪ ಪ್ರಯತ್ನವು ವೃಥಾ ಹೋಗಲಾರದೆಂಬ ದೃಢವಿಶ್ವಾಸವೂ ನನಗೆ ಇದೆ ವಾಚಕ ವಿದ್ವಾಂಸರಿಂದ ಸೂಕ್ತ ಸಲಹೆ, ಸೂಚನೆ ಗಳನ್ನು ಸದಾ ಸ್ವಾಗತಿಸುತ್ತೇನೆ ನಿರ್ದಾಕ್ಷಿಣ್ಯವಾಗಿ ಬರೆದು ತಿಳಿಸಿದರ ತುಂಬಾ ಉಪಕೃತನಾಗುತ್ತೇನೆ, ಅಂದರೆ, ನನಗೆ ಮುಂದೆ ತಿದ್ದಿಕೊಳ್ಳಲು ತುಂಬಾ ಅನುಕೂಲವಾಗುತ್ತದೆ

ಈ ಪ್ರಕೃತ ಪುಸ್ತಕ ರಚನೆಗೆ ಈ ಕೆಳಗಿನ ಮಹಾಶಯರ ಪುಸ್ತಕಗಳ ಸಹಾಯ ಪಡೆದುಕೊಂಡಿದ್ದೇನೆ —

೧) ಪರಿಮಳ ಸಾಹಿತ್ಯ ಮಂದಿರದ ಶ್ರೀ ಜಿ ಎಸ್. ಕೃಷ್ಣರಾಯರ "ಶ್ರೀ ಗುರುಸಾರ್ವಭೌಮ"

೨) ಶ್ರೀ ಭೀಮಾಚಾರ್ಯ ವಡವಿಯವರ "ಶ್ರೀಮತ್ ರಾಘವೇಂದ್ರ ಗುರು ಕಥಾಮೃತ"

೩) ಸುಬೋಧ ಕುಸುಮಾಂಜಲಿ ಗ್ರಂಥಮಾಲೆಯ ಶ್ರೀ ಎಂ ರಾಮರಾಯರ "ಶ್ರೀ ವ್ಯಾಸರಾಯಸ್ವಾಮಿಗಳು"

ಈ ಮಹಾನುಭಾವರ ಗ್ರಂಥಗಳಿಂದ ನನಗಾದ ಉಪಕಾರವನ್ನು ಕೃತಜ್ಞತಾಪೂರ್ವಕವಾಗಿ ಸ್ಮರಿಸಿ, ಆ ಆ ಲೇಖಕರಿಗೆ ನನ್ನ ಕೃತಜ್ಞತಾಪೂರ್ವಕ ಅಭಿನಂದನೆಗಳನ್ನು ನಾನು ಇಲ್ಲಿ ಸಲ್ಲಿಸುತ್ತೇನೆ.

ಉಳ್ಳಾಗಡ್ಡಿ ಓಣಿ
ಹುಬ್ಬಳ್ಳಿ

ಇಂತು,
**ಗು. ಸೀ. ಗುತ್ತಲ.**

# ಸತ್ಯಾಗ್ರಹೀ ಪ್ರಹ್ಲಾದ

*

ಜಗತ್ತಿನ ಸೃಷ್ಟಿ ಪ್ರಾರಂಭವಾದಂದಿನಿಂದ, ಉದ್ರೇಕ (Passion) ಹಾಗು ವಿವೇಕ (Reason) ಸತ್ಯ ಹಾಗು ಅಸತ್ಯ ಹಾಗು ದ್ವೇಷ ಹಾಗು ಅನುರಾಗ ಶಕ್ತಿಗಳ ಹೋರಾಟ, ಹೋರಾಟಗಳು ನಡೆಯುತ್ತಲೇ ಬಂದಿವೆ. ಈ ನಮ್ಮ ಪ್ರಪಂಚದಲ್ಲಿ ನಮ್ಮ ಪುರಾಣೇತಿಹಾಸಗಳೊಳಗಿನ ದೇವದಾನವರ ಹೋರಾಟ ಮತ್ತು ಬಾಯಬಲ್ಲಿನಲ್ಲಿಯ ಈಶ್ವರ, ಸೈತಾನರ ಹೋರಾಟಗಳು ಪ್ರಸಿದ್ಧವಾಗಿವೆ. ಪ್ರಪಂಚದ ಪ್ರಾರಂಭದಿಂದಲೂ, ಅವ್ಯಾಹತವಾಗಿ ಇದೂ ವರೆಗೆ ಈ ಇಬ್ಬರಗ ಹೋರಾಟವು ಒಂದಲ್ಲೊಂದು ಬತ್ತಿ ವ್ಯಕ್ತಿಕ್ಕಲು ಯತ್ನಿಸುತ್ತಲೇ ಇದೆ.

ಜಯವಿಜಯರು, ಮುನಿಯ ಶಾಪದಿಂದ ಭೂಲೋಕಕ್ಕೆ ಇಳಿದು ಬಂದು ದಿತಿಯ ಉದರದಲ್ಲಿ ಜನಿಸಿದರು, ಹಿರಣ್ಯಾಕ್ಷ, ಹಿರಣ್ಯಕಶಿಪುರೆಂಬ ನಾಮ ಧೇಯದಿಂದ.

ಹಿರಿಯ ಬಂಧುವಾದ ಹಿರಣ್ಯಾಕ್ಷನು ದೈತ್ಯಾಗ್ರೇಸರನು, ವರಾಹನೆಂಬ ದೈವೀಶಕ್ತಿಯೊಡನೆ, ಕಾದಾಡಿ, ಹೋರಾಟ ಕೊನೆಗೆ ಮರಣ ಹೊಂದುವವನಾದನು

ಆದಿ ವರಾಹನಿಂದ ತನ್ನ ಸಹೋದರನು ಕೊಲ್ಲಲ್ಪಟ್ಟ ವರ್ತಮಾನವನ್ನು ಕೇಳಿ, ಹಿರಣ್ಯಕಶಿಪುವು ಕೋಪದಿಂದ ಕೆರಳಿ, ಕಿಡಿಯನ್ನೇ ಕಾರತೊಡಗಿದನು. ಆ ದ್ವೇಷಿ ಪುರುಷನಾದ ಪರಮಾತ್ಮನನ್ನು ಕಾದಾಡಿ ಕೊಂದು, ಅವನ ರಕ್ತ ದಿಂದ ತನ್ನ ಬಂಧುವಿಗೆ ತರ್ಪಣವನ್ನು ಕೊಡುತ್ತೇನೆಂದು, ಮುನಿಸಿನಿಂದ ಮುಸುಗುಡತೊಡಗಿದನು. ಈ ಪ್ರತಿಜ್ಞೆಯನ್ನು ಸಾಧಿಸಲು, ಮೊದಲು ತನಗೆ ಅಮರತ್ವ ಪ್ರಾಪ್ತವಾಗಬೇಕೆಂದು ಬ್ರಹ್ಮನನ್ನು ಕುರಿತು ಘೋರ ತಪ ವನ್ನಾಚರಿಸಲಾರಂಭಿಸಿದನು. ಹುಟ್ಟೆಂಬ ತತ್ತ್ವಕ್ಕೆ ಹುರಿಯಾದ ನಾವು

ದೌಷಧಿಯನ್ನು ಹುಡುಕುತ್ತ, ಅತಿ ಘೋರ ತಪಶ್ಚರ್ಯಕ್ಕೆ ಅಣಿಯಾಗುವವನಾದನು, ಆ ಹಿರಣ್ಯಕಶಿಪುವು

ಇವನ ಉಗ್ರ ತಪಸ್ಸಿಗೆ ಮಾನವ, ದಾನವ, ದೇವರೆಲ್ಲರೂ ಗಾಬರಿ - ಗೊಂಡು, ಕೈಯೊಳಗೆ ಜೀವ ಹಿಡಿದುಕೊಂಡು, ಬ್ರಹ್ಮನಲ್ಲಿಗೆ ಬಂದು ಮೊರೆ ಹೊಕ್ಕರು, "ತ್ರಾಹಿ ತ್ರಾಹಿ"ಯಾಗಿ

ದೇವತೆಗಳು:— ದೇವಾ, ಮರಣವನ್ನೇ ಮೀರಿ, ಚಿರಂಜೀವಿಯಾಗುವಂತೆ ವರವನ್ನು ಬಯಸಿ, ತಪವನ್ನಾರಂಭಿಸಿರುವನು, ಆ ಕ್ರೂರಾತ್ಮನಾದ ಹಿರಣ್ಯಕಶಿಪುವು ಮೂರು ಲೋಕಗಳನ್ನೆಲ್ಲ ಸೂರೆಗೊಳ್ಳುತ್ತ ಧರ್ಮವನ್ನೆಲ್ಲ ಮೀರಿ ಲೋಕಕಂಟಕನಾಗಿರುವನು ಆ ದುರುಳನು

ಬ್ರಹ್ಮನು ಆ ದೇವ ವೃಂದವನ್ನು ಸಂತೈಸಿ, ಆ ಹಿರಣ್ಯಕಶಿಪುವಿನ ಬಳಿಗೆ ಬಂದು—

ಬ್ರಹ್ಮನು.— ದೈತ್ಯಾಗ್ರೇಸರನೇ, ನಿನ್ನೀ ಭಯಂಕರ ತಪಸ್ಸಿಗೆ ಮೆಚ್ಚಿ ಬಂದಿದ್ದೇನೆ. ವರವನ್ನು ಬೇಡಿಕೋ!

ಹಿರಣ್ಯಕಶಿಪು — ದೇವಾ ( ಭಕ್ತಿಯಿಂದ ವಂದಿಸುತ್ತ ) ಕೇಳು, ಪ್ರಭೋ! ಸುರ ನರ ಉರಗ ಖಗ ಮೃಗಗಳಿಂದಾಗಲೀ, ಪರಿಪರಿಯ ಚೇತನಗಳಿಂದಾಗಲೀ, ಧರಣಿ ನಭಗಳೊಳಗಾಗಲೀ, ಹಗಲಿರುಳುಗಳಲ್ಲಾಗಲೀ, ಒಳಗಾಗಲೀ, ಹೊರಗಾಗಲೀ, ಉರಿ, ಸಿಡಿಲು, ಶಸ್ತ್ರಾಸ್ತ್ರ, ಶಿಲೆಗಳಿಂದಾಗಲೀ, ವಿಷ, ಗದ, ತೃಣ, ಕಾಷ್ಠ, ಮಂತ್ರ ತಂತ್ರಾದಿಗಳಿಂದಾಗಲೀ, ದೇವಾ, ನನಗೆ ಮರಣ ಬರಬಾರದು ಇಂಥ ಅಮರತ್ವವನ್ನು ನನಗೆ ನೀಡು, ಸ್ವಾಮೀ !

ಇದಕ್ಕೆ ನಿರ್ವಾಹವಿಲ್ಲದೇ, ಆ ಬ್ರಹ್ಮನು, ಆ ದೈತ್ಯನಿಗೆ 'ತಥಾಸ್ತು' ಎಂದು ವರವನ್ನು ಕೊಡುವವನಾದನು

ಹೀಗೆ ಅಭೂತಪೂರ್ವ ವರಪ್ರದಾನದಿಂದ ಸೊಕ್ಕಿ ಮೈಮರೆತವನಾಗಿ ತನ್ನ ಪುರವಾದ ಶೋಣಿತಪುರಕ್ಕೆ ಬರುವವನಾದನು. ಇನ್ನು "ಹರಿಹರ ಬ್ರಹ್ಮಾದಿಗಳನ್ನೇ ಸೆರೆಹಿಡಿದು, ನನ್ನ ಮನೆಯ ಕಂಬಕ್ಕೆ ಕಟ್ಟಿಹಾಕುವೆನೆಂ"ದು ಆರ್ಭಟಿಸುತ್ತ, ಕೋಲಾಹಲವನ್ನೇ ಎಬ್ಬಿಸಿಬಿಟ್ಟನು, ಭೂಮಿಯ ಮೇಲೆಲ್ಲ. ಆ ವರಪ್ರಭಾವದಿಂದ ಪ್ರಮತ್ತನಾದ ಆ ದಾನವನ ಉಪಟಳದಿಂದ, ಇಡೀ ಭೂಮಂಡಲವೇ ಅದರಿ, ಬೆದರಿ, ಚದರಿ ಕಂಪಿಸತೊಡಗಿತು. ದೇವಾದಿ ದೇವತೆಗಳನ್ನೆಲ್ಲ ತನ್ನ ವರದ ದುರುಪಯೋಗದಿಂದ ಪಾದಾಕ್ರಾಂತಗೊಳಿಸಿಬಿಟ್ಟನು. ಕೊನೆಗೆ ವಿಷ್ಣು (ಹರಿ) ವಿನನ್ನು ಹುಡುಕಿಕೊಂಡು ಹೋಗಿ ಮುನಿಯಾಗಿ ಕುಳಿತಿರುವ ವಿಷ್ಣುವಿನನ್ನು ಕಂಡುಕೊಳ್ಳುವನು.

ನನ್ನ ಕಡುಹಗೆಯಾದ ಆ ಹರಿಯು ಎಲ್ಲಿಹನೆಂಬುದನ್ನೀಗ, ನನಗೆ ಹೇಳುವಿರಾ?

ವಿಷ್ಣು – ಇನ್ನು ಮರೆಮಾಚು ಏಕೆ, ದೈತ್ಯೇಂದ್ರಾ, ಕೇಳು, ನಿನಗೆ ಸಾವು ತರಲು, ಆತನು, ಎಲ್ಲೆಲ್ಲಿಯೂ ಯಾವಾಗಲೂ ಇರುವ ಆ ಹರಿಯು ನಿನ್ನ ಉದರದಲ್ಲಿ ಜನಿಸಿರುತ್ತಾನೆ, ಹೋಗು!

ಇದನ್ನು ಕೇಳಿ ಆ ದಾನವನು, ಕೆರಳಿದ ಸಿಂಹದಂತೆ ಆರ್ಭಟಿಸುತ್ತ, ಮತ್ತಿಷ್ಟು ಹುಚ್ಚೆದ್ದು, ಹಾವಳಿಮಾಡತೊಡಗಿದನು, ರಾಜ್ಯದೊಳಗೆಲ್ಲ. ಇತ್ತ ಹಿರಣ್ಯಕಶಿಪುವಿನ ಆ ಪತಿವ್ರತಾ ಶಿರೋಮಣಿಯಾದ ಕಯಾಧುವಿನ ಪುಣ್ಯೋದರದಿಂದ ಪ್ರಹ್ಲಾದನು ಜನ್ಮವೆತ್ತುವನು. ಪ್ರಹ್ಲಾದನೆಂದರೆ, ಅತ್ಯಂತ ಆಹ್ಲಾದಾಮೋದಮಯನಾಗಿ, ವಿಶ್ವದಲ್ಲೆಲ್ಲ ಆಹ್ಲಾದದ ಬೆಳುದಿಂಗಳನ್ನೇ ಬೀರಿ ಬೆಳಗುವ ಮಹಾನುಭಾವನು.

ಈ ಕುಮಾರನು, ಹುಟ್ಟಾ ಹರಿಯಲ್ಲಿ ಮನನೆಟ್ಟವನಾಗಿ ಆಟಪಾಟಗಳ ಹುಡುಗಾಟಿಕೆಗಳಿಲ್ಲದೇ ಸದಾ ಶ್ರೀಹರಿಯ ನಾಮೋಚ್ಚಾರ, ಭಜನೆ, ಸಂಕೀರ್ತನೆಗಳಲ್ಲಿಯೇ ಮೈಮರೆತಿರುತ್ತಿದ್ದನು. ತನ್ನ ಕಡುವೈರಿಯಾದ ಆ ಹರಿಯ ಹವ್ಯಾಸವನ್ನೇ ಬಿಡಿಸಿಬಿಡಬೇಕೆಂದು ಪ್ರಹ್ಲಾದನಿಗೆ, ಶುಕ್ರಾಚಾರ್ಯರ ಪುತ್ರರಾದ ಶಂಡಾಮರ್ಕರೆಂಬೀರ್ವ ಗುರುಗಳಿಂದ ಶಿಕ್ಷಣ ಪ್ರಾರಂಭಿಸುವವ

ನಾದನು, ಆ ರಾಜನು ಆ ಗುರುಗಳು, ದೈತ್ಯ ಸ್ವಭಾವಕ್ಕನುಗುಣವಾಗಿ, ಧರ್ಮ, ನೀತಿ, ಶಾಸ್ತ್ರಾದಿ ಅಭ್ಯಾಸ ಮಾಡಿಸುತ್ತ, ದೈತ್ಯಾಚರಣೆಯನ್ನೇ ಪ್ರಚಾರದಲ್ಲಿ ತರಲು ಅವನಿಗೆ ಬಲು ಬಲವಂತ ಮಾಡತೊಡಗಿದರು. ಆದರ ಆ ಪ್ರಹ್ಲಾದನು, ಇವರ ತತ್ತ್ವಕ್ಕೆ ಸತ್ಯವನ್ನೇ ಪ್ರಚಾರ ಮಾಡಲುಪಕ್ರಮಿಸಿ ದನು ಅವಿವೇಕತನಕ್ಕೆ ಪ್ರತಿ ವಿವೇಕವನ್ನೂ, ಅಸತ್ಯಕ್ಕೆ ಪ್ರತಿ ಸತ್ಯವನ್ನೂ ಉಪದೇಶಿಸಹತ್ತಿ, ಸತ್ಯಾಗ್ರಹವನ್ನೇ ಪ್ರಾರಂಭಿಸಿದನು ಆ ಗುರುಗಳೆದುರು, ಆ ಪಾಠಶಾಲೆಯಲ್ಲಿ! ಪ್ರಹ್ಲಾದನು ಒಳ್ಳೇ ಶ್ರೇಷ್ಠನುಟ್ಟಿದ ಸತ್ಯಾಗ್ರಹಿಯು, ಪ್ರಭಾವಶಾಲೀ ಕ್ರಾಂತಿಕಾರನು, ಅನುಭಾವೀ ಸತ್ಯಬೋಧಕನು ಸತ್ಯಕ್ಕಾಗಿ ನಾವನ್ನೂ ಕೂಡ ಲೆಕ್ಕಿಸದ ಸತ್ಯಾಗ್ರಹಿಯು ಜೀವಂತ ಸತ್ಯಾಗ್ರಹವೇ ಆ ಪ್ರಹ್ಲಾದನಾಗಿದ್ದನೆಂದರೆ, ಎಳ್ಳಷ್ಟೂ ಅತ್ಯುಕ್ತಿಯಾಗಲಾರದು

ಹೊರಗಣ ದೇಹಸುಖಭೋಗಾದಿಗಳನ್ನೇ ಸರ್ವಸ್ವವೆಂದು ಅರ್ಥಮಾಡಿ ಕೊಂಡು, ಮನಬಂದಂತೆ ಆಚರಿಸುವದು ತಾಮಸ ಸ್ವಭಾವವು ಅದು ತಕ್ಕ ದಲ್ಲ ಅದರಿಂದ ಕ್ಷೇಮವುಂಟಾಗಲಾರದು ಎಂದೆಂದಿಗೂ, ಎಲ್ಲವನ್ನೂ ಸಾರಾಸಾರ ವಿವೇಕದಿಂದ ವಿಮರ್ಶಿಸಿ, ಸತ್ಯಾಸತ್ಯಗಳನ್ನು ಅರಿತುಕೊಂಡು ಆಚರಿಸುತ್ತ ಅನುಭವಿಸಬೇಕು

ದೈತ್ಯರ ಮತಪ್ರಚಾರಾದಿಗಳಿಗೆಲ್ಲ ಸೊಪ್ಪುಹಾಕದ ಆ ಪ್ರಹ್ಲಾದನು, ಕೊನೆಗೆ ಹಿರಣ್ಯಕಶಿಪುವಿನಲ್ಲಿಗೆ ಒಯ್ಯಲ್ಪಟ್ಟನು

ಹಿ — ನನ್ನ ಆ ಹಗೆಯಾದ ಹರಿಯನ್ನು ಭಜಿಸಬೇಡ, ಅದೇಕೆ ಅವನ ಹೆಸರನ್ನು ಕೂಡ ಉಚ್ಚರಿಸಬೇಡ ನನ್ನ ಮುಂದೆ!

ಪ್ರಹ್ಲಾದ — ಅವನನ್ನು ಭಜಿಸಿದರೆ ಭವತಾಪ ಹಿಂಗುವದು ಅವನನ್ನು ಭಜಿಸದೆ ಇರಲಾರೆನು ನಾನು, ಅಪ್ಪಾ!

ಹಿ.- ಭಜಿಸಬೇಡೆಲೋ ಆ ಕ್ರೂರ ಹರಿಯನು, ನಿನ್ನ ಕಕ್ಕನನ್ನು ಕೊಂದ ಆ ಕ್ರೂರನನ್ನು

ತಾತನೇ, ಕಕ್ಕನು ತನ್ನ ದುಷ್ಕರ್ಮದಿಂದಲೇ ಮಡಿದನು ಯಾರು ಯಾರನ್ನೂ ಕೊಲ್ಲುವದಿಲ್ಲ, ಸಾಯುವವರೆಲ್ಲ ತಮ್ಮಿಂದ ತಾವೇ ತಮ್ಮ ಕರ್ಮವಿಪಾಕದಿಂದಲೇ ಸಾಯುತ್ತಾರೆ.

ಹಿ— ಭಜಿಸಬೇಡೆಲೋ, ಆ ಕ್ರೂರ, ಕಪಟಿ, ಆ ಕುಲಾಂಗಾರ ಹರಿಯನ್ನು, ಸರ್ವಥಾ ನೆನೆಸದಿರು, ಆ ಹರಿಯನ್ನು

ಪ್ರ— ಈ ಸರ್ವ ಚರಾಚರ ಪ್ರಾಣಿಮಾತ್ರಗಳಲ್ಲೆಲ್ಲ ಸಮನಾಗಿರುವ, ಆ ನಿರ್ದೋಷಿ, ನಿಷ್ಕಲಂಕ, ಆ ನಿರ್ಮತ್ಸರನಾಗಿರುವ, ಆ ನಿಜ ಸ್ನೇಹ ಮೂರ್ತಿಯನ್ನು ಬಿಟ್ಟು ಬೇರಾರನ್ನು ನಾನು ನೆನೆಯಲಿ ಹೇಳು ತಂದೆ, ನೀನೇ ಹೇಳು!

ಹರಿಯ ಹಟ ಹಿಡಿದು ನಿಷ್ಠನಾಗಿರುವ ಆ ಪ್ರಹ್ಲಾದನನ್ನು ಬೆದರಿಸಿ, ಬಗೆ ಬಗೆಯ ಕಷ್ಟನಷ್ಟಗಳಿಗೆ ಗುರಿ ಮಾಡುವವರಾಗುತ್ತಾರೆ, ಆ ಹಿರಣ್ಯಕಶಿಪುವಿಗಾಗಿ ಗುರುಪುತ್ರರು ಆದರೆ,

ಪ್ರ ನನ್ನ ಪಂಚಪ್ರಾಣಗಳು ಹೋಗುವಹಾಗಾದರೆ, ಆ ಪರಮಾನಂದ ಆ ಪರಮಾತ್ಮನನ್ನೇ ಧ್ಯಾನಿಸುತ್ತ ಆ ಸತ್ಯಾಗ್ರಹದಲ್ಲಿಯೇ ಹೋಗಲಿ ನಾನು ಮೃತ್ಯುವಿಗೆ ಹೆದರಿ ಹಿಂತೆಗೆಯುವವನಲ್ಲ, ಮಹಾಜನಗಳೇ! ನಾನು ನನ್ನೀ ಸತ್ಯಾಗ್ರಹದಿಂದ, ಈ ಸತ್ಯಾಗ್ರಹ ಪ್ರಯತ್ನದಿಂದ, ನನ್ನ ಈ ಗಡಸು ಮನಸ್ಸನ್ನೆಂದೆಂದಿಗೂ ಒಪ್ಪಿಸುವವನಲ್ಲ!

ಸದಾ ಸ್ವಾರ್ಥದಿಂದ ಸೊಕ್ಕಿ, ಅನ್ಯರ ಸ್ವತ್ತು, ಸ್ವಾತಂತ್ರ್ಯ, ಸುಖಾದಿಗಳನ್ನೆಲ್ಲ ಬಲಬಲಾತ್ಕಾರಗಳಿಂದ ಅಪಹರಿಸಿಬಿಟ್ಟು ಆಹುತಿ ತೆಗೆದುಕೊಳ್ಳುವುದೇ ಅಲ್ಪರ ಆದರ್ಶವಾಗಿಬಿಟ್ಟಿದೆ ಇಂದಿಗೂ! ಇದು ನನ್ನದು, ಅದೂ ನನ್ನದೇ, ಅದನ್ನೂ ಕಸಿದುಕೊಳ್ಳುವವನೇ ನಾನು, ಈ ಸಮುದ್ರವಲಯಾಂಕಿತ ಪೃಥ್ವಿಯೆಲ್ಲವನ್ನೂ ನನ್ನದಾಗಿ ಮಾಡಿಕೊಂಡೇ ಬಿಡುವವನು ನಾನು ಹೀಗೆ ಎಲ್ಲೆಲ್ಲಿಯೂ ಮೇಲಾಟ, ಹೋರಾಟ, ಕಾದಾಟಗಳು ಪ್ರಚ್ಛನ್ನವಾಗಿಯೂ, ಪ್ರಕಟವಾಗಿಯೂ ನಡೆಯುತ್ತಿರುವುದು ಮಾನವಮಾನವರಲ್ಲಿ, ದೇಶ ದೇಶಗಳಲ್ಲಿ. ಇದು ಆದಿಯಿಂದಲೂ ಇದ್ದದ್ದೇ, ಇದ್ದದ್ದು ಕಿಡಿಯಿಂದ ಕಿಡಿಕಿಡಿಯಾಗಿ ಕಿಚ್ಚೇ ಏಳುವುದು. ಇದು ನಿಂದಲಾರದು ಶಾಂತಿ ಸಮಾಧಾನಗಳು ಲಭಿಸಲಾರವು ಮಾನವನಿಗೆ, ಈ ನೊಂದಬೆಂದ ಮಾನವ ಸಮಾಜಕ್ಕೆ! ಶಸ್ತ್ರಾಸ್ತ್ರಗಳ

ಸಾಧನಗಳಿಂದ, ಸಮಾಜಕ್ಕೆ ಶಾಂತಿ, ಸುಖ, ಸಮಾಧಾನಗಳು ಸಿಗಲಾರವು ಯಾವ ಕಾಲಕ್ಕೂ ! ಯುದ್ಧಾದಿಗಳಿಂದ ವಿಜಯ ಕಂಡು ಬಂದರೂ, ಅದು ತಾಳಿ ಬಾಳಿ ಬದುಕಲಾರದು, ಚಿರಕಾಲ ಯುದ್ಧಕ್ಕೆ ಪ್ರತಿಯುದ್ಧ ಸದಾ ಸಿದ್ಧವೇ ಇದನ್ನು ಮಾನವನು ಮರೆಯಕೂಡದು "The world may pass through the fire but it is sure to perish in smoke" ಯುದ್ಧದ ಬೇಗೆ ಬೇಗುದಿಗಳು ಬಯಲಾಗಬೇಕು ಇಷ್ಟೇ ಅಲ್ಲ ಆದರೆ ಆ ಯುದ್ಧದ ಬೀಜವು ಅಂಕುರಿಸದಂತೆ ಮುರಿದು ಕಮರಿಸಿಬಿಡಬೇಕು ಅಂದರೆ ತಾನೇ ಮಾನವ ಕುಲಕ್ಕೆ ಚಿರ ಶಾಂತಿ, ಶಾಶ್ವತ ಸುಖ ! ರಾಜನು ಪ್ರಹ್ಲಾದನನ್ನು ಖಡ್ಗಶಸ್ತ್ರಾದಿಗಳಿಂದ ಬಗೆಬಗೆಯಾಗಿ ಹಿಂಸಿಸಿ, ಇರಿದು ಕೊಲ್ಲಲು ಆಜ್ಞಾಪಿಸಿದನು, ತನ್ನ ಕೊಲೆಗಡಕರಿಗೆ ಅವನನ್ನು ಅವರು ತೀಕ್ಷ್ಣ ಶೂಲಗಳಿಂದ ತರಿಯಲಾರಂಭಿಸಲು, ಕೈಯೊಳಗಿನ ಆಯುಧಗಳೆಲ್ಲ ತಮ್ಮಿಂದ ತಾವೇ ಕಳಚಿ ಬಿದ್ದು ಚೂರುಚೂರಾಗಿ ಹೋದವು ! ಹೀಗೆ ಆ ಪ್ರಹ್ಲಾದನು ಯಾವ ಆಯುಧಾದಿಗಳಿಗೂ ಜಗ್ಗಲಾರದಾದನು.

ಅವನ ಮೇಲೆ ಹಾವುಗಳನ್ನು ಕೆರಳಿಸಿ ಆ ಸೇವಕರು ಬಿಡುವವರಾದರು ಆದರೆ, ನಾವನ್ನೇ ನಾಯಿಸುವ ಆ ಸತ್ಯಾಗ್ರಹಿಗೆ, ಆ ಸರ್ಪಗಳೇನು ಮಾಡಿ ಯಾವು ? ಎಲ್ಲಿಂದಲೋ ಗರುಡನಕುಲಾದಿಗಳು ಬಂದು ಆ ವಿಷಸರ್ಪಗಳ ನ್ನೆತ್ತಿಕೊಂಡು ಹೋಗಿಬಿಟ್ಟವು!

ನಂತರ, ಅರಮನೆಯ ಅತ್ಯುಚ್ಚ ಮೇಲ್ಶಿಖರದಿಂದ ಆ ಪ್ರಹ್ಲಾದನನ್ನು ಕೆಳಗೆ ತಳ್ಳಿ ಸಾಯಗೊಳಿಸಲು ಪ್ರಯತ್ನಿಸುವವರಾದರು. ಆ ಹಿರಣ್ಯಕಶಿಪು ವಿನ ಆಜ್ಞೆಯ ಮೇರೆಗೆ ಎಷ್ಟೋ ಅಡಿಗಳ ಮೇಲಿಂದ ನೂಕಲ್ಪಟ್ಟ ಆ ಪ್ರಹ್ಲಾ ದನಿಗೆ ಏನೂ ಗಾಯ ಕೂಡ ಆಗಲಿಲ್ಲ. ಅವನ ಪ್ರಸನ್ನ ಮುಖವು ಕೊಂಚ ಕೂಡ ಬಾಡಿರಲಿಲ್ಲ!

ಕೊನೆಗೆ ಬೇಸತ್ತು ಅವನನ್ನು ನಡುಗಡಲನಲ್ಲಿ, ನಾಯಲೆಂದು, ನೂಕಿ ಬಿಡುವವರಾದರು ಆದರೆ ಅಲ್ಲಿಯೂ ಅವನ ತಿಮಿರತ್ವಕ್ಕೆ ಏ ಘಟಿಸಲಿಲ್ಲ ಮತ್ತೆ ಎಂದಿನಂತೆ ದಿವ್ಯ ವಸ್ತ್ರಾಲಂಕಾರಗಳಿಂದ ಮಂಡಿತನಾಗಿ, ಆ ಪ್ರಹ್ಲಾ

||ವಿಷಮಪ್ಯಮೃತಂ ಕ್ವಚಿದ್ಭವೇತ್ ಅಮೃತಂ ವಾ ವಿಷಮೀಶ್ವರೇಚ್ಛಯಾ||

ಈ ರೀತಿಯಾಗಿ ಸಾವಿನ ಪ್ರಯತ್ನಗಳೆಲ್ಲ ನಿಷ್ಫಲವಾಗಲು, ಆ ಹಿರಣ್ಯಕಶಿಪುವಿಗೆ ದಿಕ್ಕೇ ತೋಚದೆ, ಭ್ರಾಂತಿಯೇ ಅವನನ್ನು ಆವರಿಸತೊಡಗಿತು

ಪ್ರ — ಸಹೋದರರೇ, ದೇಹಿಗಳಿಗೆ ದೇಹಸುಖಸೌಖ್ಯಾದಿಗಳು ಸಿಗುವವರಲ್ಲೇನಾಶ್ಚರ್ಯವಿದೆ! ಪ್ರಯತ್ನವಿಲ್ಲದೇ ದುಃಖವು ಲಭಿಸುವಂತೆ, ಸುಖವೂ ಲಭಿಸುವದುಂಟು ಮಾನವನಿಗೆ, ಈ ಪ್ರಪಂಚದಲ್ಲಿ ಮಾನವನಿಗೆ ಮೋಕ್ಷ ಮುಖ್ಯ ಅದೇ ಕೊನೆಯ ಘಟ್ಟ ಮೋಕ್ಷಕ್ಕಾಗಿ, ಆ ಅಖಂಡಾನಂದಕ್ಕಾಗಿ ನಾವೆಲ್ಲರೂ ಪ್ರಯತ್ನಿಸಬೇಕು ಶ್ರಮಿಸಬೇಕು ಅದಕ್ಕಾಗಿ, ಆ ಸತ್ಯಕ್ಕಾಗಿ ಸಾಯಲೂಬೇಕು ಸತ್ಯಕ್ಕಾಗಿ ಸಾಯುವವನು ಸಾಯಲಾರನು, ಎಂದಿಗೂ ಸಾಯಲಾರನು

ಅವನು ಸದಾ ಅಮರನು, ನನ್ನಂತೆ ಕೀಳಾಗಿ ಕಿಂಕರನಂತೆ, ಕೈಲಾಗದ ಹೇಡಿಯಂತೆ ಬಾಳುವದು ಬಾಳೇ! ಅಲ್ಲ ಸರ್ವಥಾ ಅಲ್ಲ ಅರ್ಥವಿಲ್ಲದ ಬಾಳು ಹಾಳು, ಅದೇ ಸಾವು ! ಅರ್ಥವುಳ್ಳ ಸಾವು, ಸತ್ಯಕ್ಕಾಗಿ ಆಗ್ರಹದ ಸಾವಾಗಿದ್ದರೂ, ಅದು ಸಾವಲ್ಲ. ಅದು ಅಮರತ್ವವು ಆ ಪರಮಾತ್ಮನು ಸತ್ಯನು ನಿತ್ಯನು, ಅವ್ಯಯನು, ಶುದ್ಧನು, ಏಕಮೇವಾದ್ವಿತೀಯನು. ಅಂದ ಮೇಲೆ ಇಂಥ ಅಮರತತ್ವಕ್ಕೆ ಮರಣ ಬರುವದುಂಟೇ ! ಎಂದೆಂದಿಗೂ ಇಲ್ಲ. ಮರಣವು ಈ ಎಲ್ಲ ದೇಹಗಳಿಗೆ, ಈ ಹೊರತೊಗಟೆಗಳಿಗೆ ಮಾತ್ರ ನನ್ನ ಈ ಸತ್ಯಕ್ಕೆ ಸಾವಿಲ್ಲ ಅದು ಸದಾ ಅಮರ

ಕೊನೆಗೆ ಆ ನಿರಾಸೆಗೊಂಡ ಹಿರಣ್ಯಕಶಿಪುವು ಪ್ರಹ್ಲಾದನನ್ನು ಬರಮಾಡಿಕೊಂಡು,

ಹಿ-- ತಮ್ಮಾ, ಆ ನಿನ್ನ ಹರಿ ಯಾರು? ಅವನು ಎಲ್ಲಿ? ನನಗಿಷ್ಟು ತೋರಿಸು ಅವನನ್ನು; ಅಂದರೆ ಅವನೊಡನೆ ಈಡಾಡಿ, ನನ್ನ ಈ ಕೈ ತೋರಿಸಿಬಿಡುತ್ತೇನೆ (ಕತ್ತಿಯನ್ನೇ ಹಿಡಿಯುತ್ತ) ಜ್ಞಾನವಿಲ್ಲದ ವಿದ್ಯೆ ವ್ಯರ್ಥ, ಸ್ತ್ರೀಗೆ ಲೆಕ್ಕವಿಲ್ಲದಷ್ಟು ಒಡವೆ ಆಭರಣಗಳಿದ್ದಾಗ್ಯೂ, ಮಂಗಲಸೂತ್ರವಿಲ್ಲದಂತೆ !

ಪ್ರ— ನೀನು ಅವನನ್ನು, ಆ ಸತ್ಯಸ್ವರೂಪಿ ಹರಿಯನ್ನು, ಏತರಲ್ಲಿ ನೋಡಿಸುವೆ? ಮತ್ತು ಏತರಲ್ಲಿ ಗೆಲ್ಲುವೆ?

ಭುಜಬಲ ಆತನದು, ಕರ, ಚರಣ, ನಗೆ, ನುಡಿ, ನೋಟ, ಕರಣಗಳು, ಮಾತನಾಡುವ ಈ ನನ್ನುಸಿರ ನಾಲಗೆ ಕೂಡ ಆತನದು. ಅವನಿಲ್ಲದ್ದು, ಅವನದಲ್ಲವಾಗಿರುವುದು, ಈ ವಿಶ್ವದಲ್ಲಿಯೇ ಇರುವುದಿಲ್ಲ, ತಾತಾ! ಆ ಮಹಾಮಹಿಮನಾದ ಶ್ರೀ ಹರಿಯು, ವಿಶ್ವವ್ಯಾಪಿಯು, ಎಲ್ಲೆಲ್ಲಿಯೂ ಯಾವಾಗಲೂ ಇರುವವನು! ಅದೇಕೆ, ನಿನ್ನಲ್ಲಿಯೂ ಇದ್ದಾನೆ ನನ್ನಲ್ಲಿಯೂ ಇದ್ದಾನೆ

ಹಿ — ಎಲ್ಲೆಲ್ಲಿಯೂ ಅವನು ಇರುವನೆ? ಆದರೆ ಈ ಸಭಾಕಂಬದಲ್ಲಿಯೂ ಇದ್ದಾನೆಯೋ ಆ ನಿನ್ನ ತುಚ್ಛ ಹರಿಯು?

ಪ್ರ — ಅರ್ಥಾತ್ !

ಹಿ — ಹೊರಗೆ ಬಂದು ನನಗೆ ಕಾಣಿಸಿಕೊಳ್ಳಲಿ ಹಾಗಾದರೆ!

"ಓದಿಸುವ ಗುರುಗಳನ್ನು ಜಯಿಸಿ, ಸಹೋದರ ಗೆಳೆಯರಿಗೆಲ್ಲ ಉಪದೇಶಿಸಿದ ಆ ಪರಾತ್ಪರನು, ಸರ್ವಗುಣಸಂಪೂರ್ಣನು ಎಲ್ಲಿ?" ಎಂದು ಆ ಹಿರಣ್ಯಕಶಿಪುವು ಕೇಳಿದಾಗ, ತತ್‌ಕ್ಷಣ ಆ ಸ್ತಂಭದಿಂದ ನರಸಿಂಹನ ರೂಪದಿಂದ ಆ ಹರಿಯು ಪ್ರಕಟನಾದನು, ಆ ಸಭೆಯಲ್ಲಿ.

ಆಗ ಆ ಭಯಂಕರ ವಿಕರಾಳ ನರಕೇಸರಿಯನ್ನು ಕಂಡು ಅವನ ಗುರುತರ ಗರ್ಜನೆ ಕೇಳಿ, ಇಡೀ ಭೂಗೋಲಕವೇ ಕಂಪಾಯಮಾನವಾಗತೊಡಗಿತಂತೆ!

ಆಗ ನರಹರಿಯು ಆ ದೈತ್ಯ ಹಿರಣ್ಯಕಶಿಪುವನ್ನು ಹಿಡಿದೆಳೆದು, ಹೊರಹೊಸ್ತಿಲಮೇಲೆ, ತನ್ನ ತೊಡೆಯಮೇಲೆ ಮಲಗಿಸಿಕೊಂಡು, ಅವನ ಹೊಟ್ಟೆಯನ್ನೇ ತನ್ನ ನಖಗಳಿಂದ ಸೀಳಿ, ಕರುಳುಗಳನ್ನೇ ಹೊರಗೆ ಎಳೆದು ಬಿಟ್ಟು ಅವುಗಳನ್ನು ತನ್ನ ಕೊರಳೊಳಗೆ ಹಾಕಿಕೊಂಡನು. ದೈತ್ಯಸಂಹಾರವಾಯಿತು.

ಪ್ರ:— ಪ್ರಭೂ, ನನ್ನ ತಾತನ ಹೊಟ್ಟೆಯೊಳಗೆಲ್ಲ ಅದೆಷ್ಟು ಗರ್ಭಾಟೆ ನಡೆಸಿರುವೆಯಲ್ಲ? ಉದರಲ್ಲೇನಿದೆ ಇಷ್ಟು ಗರ್ಭಾಡಲಿಕ್ಕೆ ಸ್ವಾಮೀ!

ನರಹರಿ — ಕೇಳು ಕಂದಾ! ಹೊಟ್ಟೆಯ ಕರುಳಾದ ನಿನ್ನನ್ನು ಪರಿಪರಿಯಿಂದ ಗೋಳಾಡಿಸಿ, ವಿಲಿವಿಲಿ ಒದ್ದಾಡಿಸಿದ ಈ ಕರುಳುಕಟುಕನೊಳಗೆ ಏನಾದರೂ ಪುತ್ರಪ್ರೇಮದ ಲವಲೇಶವಾದರೂ ಇರುವದೋ ಏನೋ ಎಂಬುದನ್ನಿಷ್ಟು ಹುಡುಕುತ್ತ ಇದ್ದೇನೆ. ಪುತ್ರವಾತ್ಸ ಲ್ಯವೇ ಇಲ್ಲ ಈ ದಾನವನಲ್ಲಿ !

ಇದಕ್ಕೆ ಇನ್ನೊಂದು ಕಾರಣವುಂಟು ಪ್ರಹ್ಲಾದಾ ! ನಿನ್ನಂಥ ಭಾಗವತ ರತ್ನಗಳು, ಸತ್ಯಾಗ್ರಹಮಣಿಗಳು ಇನ್ನೂ ಇವನ ಉದರದೊಳಗೆ ಹುದುಗಿ ಕೊಂಡಿರುವವೆಂಬುದನ್ನೂ ಎಣಿಸಿ ನೋಡುತ್ತೇನೆ

ಆ ಮಹೋಗ್ರ ನಾರಸಿಂಹಮೂರ್ತಿಯ ಕಂಪಡರಿದ ಕೋಪಾಗ್ನಿಯನ್ನು ಶಮನಗೊಳಿಸಲು ಆ ಪ್ರಹ್ಲಾದನೇ ಸಮರ್ಥನಾದನು

ನಾರಸಿಂಹನು ಆ ಪ್ರಹ್ಲಾದನ ಭಕ್ತಿನಿಷ್ಠೆಗಳಿಗೆ ಮೆಚ್ಚಿ ಶಾಂತನಾಗಿ ಕಂದಾ ಪ್ರಹ್ಲಾದಾ, ನಿನಗೆ ನಾನು ಮೆಚ್ಚಿದ್ದೇನೆ, ಪ್ರಸನ್ನನಾಗಿದ್ದೇನೆ, ವರವನ್ನು ಕೇಳಿಕೋ! ನೀಡುವೆ ನಿನಗಾಗಿ!

ಪ್ರ -- ನೀನು ನನ್ನ ತಂದೆಯನ್ನು ಆ ನಿನ್ನ ತೊಡೆಯ ಮೇಲೆ ಹಾಕಿಕೊಂಡಾಗ್ಗೆ, ನಿನ್ನ ಕುಡಿನೋಟದಿಂದ ಅವನು ಪಾವನನಾಗಿ ದ್ದಾನೆ ಪ್ರಭೋ! ಹೇ ದೀನಬಂಧೋ ಹೇ ದಯಾಸಿಂಧೋ, ನಿನ್ನನ್ನು ದೂಷಿಸಿ, ದ್ವೇಷಿಸಿ, ನಿನಗಾಗಿ ನನ್ನನ್ನು ಪೀಡಿಸಿ, ಹಿಂಸಿಸಿ ಗೋಳಾಡಿಸಲಿಕ್ಕೆ ಮುಖ್ಯ ಕಾರಣವಾದ ಅವನ ಅಜ್ಞಾನಾದಿಪಾಪ- ಪಾತಕಗಳನ್ನೆಲ್ಲ ಪರಿಹಾರಮಾಡುವವನಾಗಿ ಅವನಿಗೂ ಒಳ್ಳೇ ಸದ್ಗತಿ ದಯಪಾಲಿಸುವವನಾಗು ಭಕ್ತವತ್ಸಲಾ, ನನಗೆ ಹೆಚ್ಚಿಗೆ ಬೇಡ !

ಹೀಗೆ ಆ ನರಹರಿಯು ಆ ಪ್ರಹ್ಲಾದನಿಗೆ ಇಷ್ಟಾರ್ಥಗಳನ್ನೆಲ್ಲ ಕೊಟ್ಟು, ಅವನಿಗೆ ಪಟ್ಟಾಭಿಷೇಕವನ್ನು ಮಾಡುವವನಾಗಿ, ಕೊನೆಗೆ ಅಂತರ್ಧಾನ ಹೊಂದುವವನಾದನು

ಪ್ರೇಮುಗಳಿಂದ ಬಾಳಿ ಬದುಕಿ, ಕೊನೆಗೆ ಭಾರತವು ಬಾಳಲೆಂದು ಅಮರರಾಗ ಲಿಲ್ಲವೇ! ಅವರ ಭೌತಿಕ ದೇಹವು ಅಳಿದುಹೋದರೂ, ತಮ್ಮ ಆತ್ಮಬಲರೂಪ ವಾದ ಶಕ್ತಿಯನ್ನೇ ನಮಗೆ ಪಿತ್ರಾರ್ಜಿತ ಸ್ವತ್ತಾಗಿ ಬಿಟ್ಟುಹೋಗಿರುವರಲ್ಲವೇ!

ಪ್ರಹ್ಲಾದನಂಥ ಸತ್ಯಾಗ್ರಹಿಯ ದಿವ್ಯಬಾಳು, ಹೂವಾಗಿ ಉದುರಿ ಹೋಗುವದಲ್ಲ, ಕಾಯಾಗಿ ಕಂದಿಹೋಗುವದಲ್ಲ, ಹಣ್ಣಾಗಿ ಇಳಿದು ಕೊಳೆತು ಹೋಗುವದಲ್ಲ ಅದು ಅಮರವಾದದ್ದು, ದೇವದಿವ್ಯವಾದದ್ದು

"ಸೌಂದರ್ಯವೇ ಸತ್ಯ, ಸತ್ಯವೇ ಸೌಂದರ್ಯ! Beauty is Truth & Truth is Beauty" ಮರಣದ ಅಂಜಿಕೆ ಹೋಗಬೇಕಾದರೆ ಮಾನವನು ರಣಧೀರನಾಗಬೇಕು, ಬಡತನದಂಜಿಕೆ ಹೋಗಬೇಕಾದರೆ, ಮಾನ ವನಿಗೆ ದುಡಿತ, ಸಮಾಜ-ದೇಶತತ್ವ ಅವನಲ್ಲಿ ಮನೆಮಾಡಿಕೊಂಡಿರಬೇಕು

Remember we are the descendents of Prahlad & Sudhanva, both passive resisters of the purest type. Can we in the present crisis be equal to our forefathers? M K GANDHI.

ಪ್ರಹ್ಲಾದನು, ಮಹಾ ಭಾಗವತಾಗ್ರೇಸರನು, ಮಹಾ ಅಹಿಂಸಾ ವಾದಿಯು, ಮತ್ತು ಸತ್ಯಾಗ್ರಹ ಶಿರೋಮಣಿಯು. ಹಿಂಸೆ ಬಲಾತ್ಕಾರ ಅತ್ಯಾ ಚಾರಾದಿಗಳನ್ನೆಲ್ಲ ಅಹಿಂಸೆಯಿಂದಲೆ ಮಣ್ಣುಗೂಡಿಸಿದ ಮಹಾತ್ಮನು. ವಿವಿಧಾ ನೇಕ ಶಸ್ತ್ರಾಸ್ತ್ರ ಆಯುಧಾದಿಗಳನ್ನು ಸತ್ಯಾಗ್ರಹದಿಂದಲೇ ಸೋಲಿಸಿ ಸವೆ ಬಡೆದವನು. ಅಸತ್ಯವನ್ನು ಸತ್ಯಸತ್ಯಾಗ್ರಹದಿಂದಲೂ, ಪರಸ್ಪರ ಪ್ರೇಮ ದಿಂದಲೂ ಅಳಿಸಿ, ಸಿದ್ಧಮಾಡಿ ಪ್ರಕಟಗೊಳಿಸಿದ ಸತ್ಯಸಂಧನು ಆ ಪ್ರಹ್ಲಾದನು ಸಾವಿನೊಂದಿಗೇ ಸತ್ಯಾಗ್ರಹದಿಂದ ಸೆಣಸಾಡಿ ಸಾಯಿಸಿದ ಅಮರಬಂಟನು.

ಓದಿಸುವ ಗುರುಗಳನು ಜರೆದು ಸಹೋದರರಿಗುಪದೇಶಿ
ಸಿದ ಮಹದಾದಿಕಾರಣ ಸರ್ವಗುಣಸಂಪೂರ್ಣ ಹರಿಯೆಂದೂ ।
ವಾದಿಸುವತ್ವತ್ಪತಿ ತೋರೆಂದಾದನುಜಬೆಸಗೊಳಲು
ಸ್ತಂಭದಿತ್ರೀದಸಾಕ್ಷಣ ತೋರಿಸಿದ ಪ್ರಹ್ಲಾದ ಸಲಹೆಮ್ಮ ॥

—ಜ. ದಾಸರು

# ಶ್ರೀ ವ್ಯಾಸತೀರ್ಥರು



ಅರ್ಥಿಕಲ್ಪಿತ ಕಲ್ಪೋಽಯಂ ಪ್ರತ್ಯರ್ಥಿಗಜಕೇಸರೀ ।
ವ್ಯಾಸತೀರ್ಥಗುರುರ್ಭೂಯಾದಸ್ಮದಿಷ್ಟಾರ್ಥಸಿದ್ಧಯೇ ॥

ಸ್ವಾತಂತ್ರ್ಯ ಪ್ರೀತಿಯು ಮಾನವನಿಗೆ ಅಗತ್ಯವಾದದ್ದು. ಸ್ವಾತಂತ್ರ್ಯವು ಮಾನವನ ಜನ್ಮಸಿದ್ಧಹಕ್ಕು. ಈ ಸ್ವಾತಂತ್ರ್ಯವು ಧಾರ್ಮಿಕ ಮನೋಭಾವ ದೊಂದಿಗೆ ಬೆರೆಯಬೇಕು. ಇಲ್ಲದಿದ್ದರೆ ಅದಕ್ಕೆ ಬೆಲೆಬಾರದು. ಧರ್ಮಕಾರಣ ವಿಲ್ಲದೆ ರಾಜಕಾರಣವು ಬಾಳಲಾರದು, ಬಾಳಿ ಬದುಕಲಾರದು ದುಷ್ಟ ದಮನಕ್ಕೆ, ಶಿಷ್ಟಸಂರಕ್ಷಣೆಗೆ ರಾಜದಂಡವೂ ಬೇಕು ಅದರ ಬೆನ್ನು ಹಿಂದೆ ಧರ್ಮದಂಡವೂ ಬೇಕು. ಧರ್ಮ, ನೀತಿ ಹಾಗು ರಾಜನೀತಿ ಇವು ಒಂದೇ ಕಲ್ಯಾಣ ನಾಣ್ಯದ ಎರಡು ಬದಿಗಳು ಒಂದನ್ನು ಬಿಟ್ಟು ಒಂದು ಇರಲಾರದು.

ಶ್ರೀಮಧ್ವಗವತ್ಪಾದ್ಯರ್ಯಸಾಧಕರಾದ ಶ್ರೀಮನ್ಮಧ್ವಾಚಾರ್ಯರಿಗೆ ಶ್ರೀ ಪದ್ಮನಾಭತೀರ್ಥರು, ಶ್ರೀ ನರಹರಿತೀರ್ಥರು, ಶ್ರೀ ಮಾಧವತೀರ್ಥರು ಮತ್ತು ಶ್ರೀ ಅಕ್ಷೋಭ್ಯತೀರ್ಥರು, ಹೀಗೆ ನಾಲ್ಕುಜನ ಶಿಷ್ಯೋತ್ತಮರಾಗಿದ್ದರು.

ಶ್ರೀ ಅಕ್ಷೋಭ್ಯತೀರ್ಥರಿಗೆ ಶ್ರೀ ಜಯತೀರ್ಥರೆಂಬ ಶಿಷ್ಯಶ್ರೇಷ್ಠರು ಲಭಿಸಿ ಶ್ರೀಮದಾಚಾರ್ಯರ ಗ್ರಂಥಗಳಿಗೆ ಟೀಕೆಟಿಪ್ಪಣಿ ಬರೆದು, ಶ್ರೀಮಟ್ಟೀಕಾ ಚಾರ್ಯರೆಂದು ಪ್ರಸಿದ್ಧಿ ಪಡೆದು ಶ್ರೀಮನ್ಮಧ್ವಶಾಸ್ತ್ರ ವಿಜಯಸ್ತಂಭವನ್ನು ಶೋಭಾಯಮಾನವಾಗುವಂತೆ ಸ್ಥಾಪಿಸಿ ಮೆರೆಯಿಸುವವರಾದರು. ಇವರಿಗೆ, ವಿದ್ಯಾಧಿರಾಜರೂ, ವಿದ್ಯಾಧಿರಾಜರಿಗೆ, ರಾಜೇಂದ್ರರೂ, ಈ ರಾಜೇಂದ್ರರಿಗೆ ಜಯಧ್ವಜರೆಂಬ ಶಿಷ್ಯರೂ ಲಭಿಸಿದರು. ಇವರು ಶ್ರೀ ಗುರುಪರಂಪರಾಪ್ರಾಪ್ತ ವಾದ ಸತ್ಸಂಪ್ರದಾಯಾದಿಗಳನ್ನು ಮುಂದುವರಿಸುವವರಾದರು.

ಈ ಜಯಧ್ವಜರಿಗೆ, ಮುಂದೆ, ಪುರುಷೋತ್ತಮತೀರ್ಥರೆಂಬುವವರು ಶಿಷ್ಯರಾದರು. ಈ ಯತಿಪುಂಗವರಲ್ಲಿ ವಿದ್ಯಾಭ್ಯಾಸಮಾಡಿಕೊಂಡು ನರಸಿಂಹಾ

ಚಾರ್ಯನೆಂಬ ಒಬ್ಬ ವಟುವಿರುತ್ತಿದ್ದನು ಮುಂದೆ ಶ್ರೀ ಭಗವದಾಜ್ಞಾನು ಸಾರವಾಗಿ, ಈ ನರಸಿಂಹಾಚಾರ್ಯನಿಗೇನೇ, ಆಶ್ರಮವಿತ್ತು, ಶ್ರೀ ಸುಬ್ರಹ್ಮಣ್ಯತೀರ್ಥರೆಂದು ನಾಮಕರಣಮಾಡಿದರು

ಶ್ರೀ ಬ್ರಹ್ಮಣ್ಯತೀರ್ಥರು ಬೆಂಗಳೂರ ಜಿಲ್ಲೆಯ ಚನ್ನಪಟ್ಟಣಕ್ಕೆ ನಾಲ್ಕು ಮೈಲು ದೂರದಲ್ಲಿರುವ ಅಬ್ಬೂರಿನಲ್ಲಿ ವಾಸವಾಗಿರುತ್ತಿದ್ದರು ಇವರು ತಮ್ಮ ಆಶ್ರಮದ ಬದಿಯಲ್ಲಿ ಹರಿಯುತ್ತಿರುವ ಕಣ್ವ ನದಿಯಲ್ಲಿ ನಿತ್ಯ ಸ್ನಾನಮಾಡಿ ಕೊಂಡು, ತಮ್ಮ ಸಂಸ್ಥಾನ ಶ್ರೀ ಯೋಗಪಟ್ಟಿಕಾನರಸಿಂಹಮೂರ್ತಿ, ಶ್ರೀ ವಿಠ್ಠಲಸ್ವಾಮಿ ಮುಂತಾದ ಮೂರ್ತಿಗಳನ್ನು ಪೂಜಾರಾಧನೆಮಾಡುತ್ತ, ಆಶ್ರಮವಿಹಿತ ಕರ್ಮಾನುಷ್ಠಾನಮಾಡುತ್ತ, ಶಿಷ್ಯರಿಗೆ ಪಾಠಪ್ರವಚನ ಗ್ರಂಥಾ ವಲೋಕನ ವ್ಯಾಸಂಗಮಾಡಿಸುತ್ತ ಕಾಲಕಳೆಯುತ್ತಿದ್ದರು ಇವರ ಶಿಷ್ಯರು ಊರೊಳಗೆ ಹೋಗಿ ಮಾಧುಕರ ಬೇಡಿಕೊಂಡು ಭಿಕ್ಷಾನ್ನತರುತ್ತಿದ್ದರು ಅದನ್ನು ಪ್ರೋಕ್ಷಿಸಿ, ಪಾವನಗೊಳಿಸಿ, ಸ್ವಲ್ಪ ಬಿಸಿಮಾಡಿ ಅದೇ ಪಾಲುಪಕ್ವಾನ್ನವನ್ನೇ ಸ್ವಾಮಿಗೆ ನಿವೇದಿಸಿ, ಶ್ರೀ ಬ್ರಹ್ಮಣ್ಯತೀರ್ಥರು ಅದೇ ಭಗವತ್ಪ್ರಸಾದನೆಂದು ಸ್ವೀಕರಿಸಿ, ಶಿಷ್ಯರೊಂದಿಗೆ ಭೋಜನಮಾಡುತ್ತಿದ್ದರು ಇದೇ ಕ್ರಮವಾಗಿ ಕೆಲಕಾಲ ಉರುಳಿತು.

ಶಾಲಿವಾಹನ ಶಕೆ ೧೩೬೬-೬೭ ನೇ ವರ್ಷಕಾಲ ಶ್ರೀ ವ್ಯಾಸತೀರ್ಥರ ಜನನ ವಿಷಯವಾಗಿ ಅನೇಕ ಪಾಠಾಂತರಗಳಿವೆ ಸೋಮನಾಥನೆಂಬ ಕವಿಯು ಸಂಸ್ಕೃತ ಭಾಷೆಯಲ್ಲಿ "ಶ್ರೀವ್ಯಾಸಯೋಗಿ ಚರಿತಂ'' ಎಂಬವೊಂದು ಚಂಪೂ ಗ್ರಂಥ ಬರೆದಿರುವನು ಅದರಲ್ಲಿ ಇವರ ಜನನ ವೃತ್ತಾಂತವು ಹೀಗೆ ಬರುತ್ತದೆ -

ಮೈಸೂರು ಸಂಸ್ಥಾನದ ಬನ್ನೂರೆಂಬ ಗ್ರಾಮದಲ್ಲಿ ಬಲ್ಲಣಸುಮತಿ ಎಂಬ ಒಬ್ಬ ವಿಪ್ರೋತ್ತಮನಿದ್ದನು. ಅವನಿಗೆ ಲಕ್ಷ್ಮಾಂಬೆ ಎಂಬವಳು ಸಹಧರ್ಮ ಚಾರಿಣಿಯಾಗಿದ್ದಳು ಇವರು ಸಂತತಿ ಪ್ರಾಪ್ತಿಗಾಗಿ ಶ್ರೀ ಭಗವದಾರಾಧನೆ ಮಾಡುತ್ತಿದ್ದರು

ಶ್ರೀ ವೇದವ್ಯಾಸರು ಸ್ವಪ್ನದಲ್ಲಿ ಬಂದು ಒಂದು ದಿವ್ಯ ಹರಿವಾಣವನ್ನು ಕೊಟ್ಟು 'ನಿಮಗೆ ಸಂತಾನವಾಗುವದು ಮತ್ತು ಶ್ರೀ ಬ್ರಹ್ಮಣ್ಯತೀರ್ಥರೆಂಬ

ಗಳಿಲ್ಲದ ಸರ್ವಾಂಗಸುಂದರ ದಿವ್ಯ ದೇಹಸಂಪತ್ತು, ನಿರ್ಭೀತಿ, ಗಾಂಭೀರ್ಯ ಅವನ ಮೇರೆಯರಿಯದ ಬುದ್ಧಿವೈಭವ, ಮತ್ತು ನಿಷ್ಕಲಂಕ ವಿದ್ಯಾಸಂಪತ್ತು, ಅವನ ಆಕರ್ಷಕ ರಾಜತೇಜೋವೈಭವ, ಇವುಗಳನ್ನೆಲ್ಲ ಕಂಡು ಆ ಗುರುಗಳಿಗೆ ತುಂಬಾ ಕೃತಕೃತ್ಯತೆಯೆನಿಸಿ, ಸದಾ ಸಂತೋಷವುಳ್ಳವರಾಗಹತ್ತಿದರು ಅವನಿಗೆ ಇನ್ನು ಸಂನ್ಯಾಸ ದೀಕ್ಷೆಕೊಟ್ಟು, ತಾವು ಕೃತಾರ್ಥರಾಗಿಬಿಡಬೇಕೆಂದು ಮನಸ್ಸು ಮಾಡುವವರಾದರು

ಕೊನೆಗೆ ಯತಿರಾಜನ ಸಮ್ಮತಿಯ ಮೇರೆಗೆ, ಶ್ರೀ ಸುಬ್ರಹ್ಮಣ್ಯರು ಅವನ ಸುಮಾರು ೧೧ ನೇ ವಯಸ್ಸಿನಲ್ಲಿ, ಸಂನ್ಯಾಸವನ್ನೀಯುವವರಾದರು ಹೀಗೆ ಶಾ ಶ ೧೩೭೫, ಕ್ರಿ ಶ ೧೪೫೩ ರಲ್ಲಿ ಶುಭ ಮುಹೂರ್ತದಲ್ಲಿ ಸಂನ್ಯಾಸ ದೀಕ್ಷೆಯಾಗಿ, ವಿಧ್ಯುಕ್ತ ಕರ್ಮಾಂಗ ನಡೆದು, ಯತಿರಾಜನಿಗೆ "ಶ್ರೀ ವ್ಯಾಸತೀರ್ಥ"ರೆಂಬ ನಾಮಕರಣವಾಗಿ, ಪ್ರಣವಾದಿ ರಹಸ್ಯ ಉಪದೇಶ ಮಾಡುವವರಾದರು

ಮುಂದೆ ಶ್ರೀ ಬ್ರಹ್ಮಣ್ಯತೀರ್ಥರು, ಶ್ರೀ ವ್ಯಾಸತೀರ್ಥರೊಂದಿಗೆ, ಯಾತ್ರಿ ತೀರ್ಥಸಂಚಾರಕ್ರಮವಾಗಿ, ಕಂಚಿಗೆ ಬಂದರು ಅಲ್ಲಿ, ಶ್ರೀ ವರದರಾಜ ಸ್ವಾಮಿ, ಶ್ರೀ ಏಕಾಮ್ರನಾಥ ಸ್ವಾಮಿಗಳ ದರ್ಶನದಿಂದ ಪುನೀತರಾಗಿ ಅಲ್ಲಿಯೇ ಕೆಲಕಾಲ ವಾಸಿಸುವವರಾಗಿಬಿಟ್ಟರು.

ಶ್ರೀ ವ್ಯಾಸತೀರ್ಥರು ಸರ್ವಶಾಸ್ತ್ರಪಾರಂಗತರಾಗಿದ್ದರು ಷಟ್‌ಶಾಸ್ತ್ರಗಳಂತೂ ಅವರಿಗೆ ಕರತಲಾಮಲಕವಾಗಿಬಿಟ್ಟಿದ್ದವು. ಹೀಗೆ ಅವರ ಅಗಾಧ ಪಾಂಡಿತ್ಯ ಮತ್ತು ಅತುಲ ಪ್ರತಿಭೆಗಳು ದಿನದಿನಕ್ಕೂ ವಿದ್ವಾಂಸರನ್ನು ಬೆರಗುಗೊಳಿಸಹತ್ತಿದವು

ಮೈಸೂರು ರಾಜ್ಯದ ಕೋಲಾರ ಜಿಲ್ಲೆಯಲ್ಲಿ "ಮುಳಬಾಗಿಲು" ಅಂದರೆ "ಮುಳುವ ನಗರಿ" ಎಂಬ ಒಂದು ನಗರವು ಆಗ ಸರಸ್ವತೀಪೀಠವೆಂದು ಹೆಸರುವಾಸಿಯಾಗಿದ್ದಿತು ಶ್ರೀ ಪದ್ಮನಾಭತೀರ್ಥರ ಪರಂಪರೆಯಿಂದ ಶ್ರೀ ಲಕ್ಷ್ಮೀನಾರಾಯಣ ಮುನಿಗಳೆಂಬ ಯತಿಶ್ರೇಷ್ಠರು ಆ ಮುಳಬಾಗಿಲನ್ನು

ತಮ್ಮ ಮುಖ್ಯ ಪೀಠವನ್ನಾಗಿ ಮಾಡಿಕೊಂಡಿದ್ದರು ಈ ಮಹನೀಯರೇ ಶ್ರೀಪಾದರಾಯರು!

ಇವರು ಒಳ್ಳೇ ವಿದ್ವಚ್ಛಿರೋಮಣಿಗಳು, ವಾಗ್ವಜ್ರಾದಿ ಗ್ರಂಥ ರಚಿಸಿದ ಶ್ರೀಮದ್ವೈಷ್ಣವ ಶಿರೋಮಣಿಗಳು ಪೂರ್ವಾಶ್ರಮದಲ್ಲಿ ಈ ಶ್ರೀಪಾದರಾಯರಿಗೂ ಶ್ರೀ ಬ್ರಹ್ಮಣ್ಯತೀರ್ಥರಿಗೂ ಶರೀರಸಂಬಂಧವೂ, ಲೌಕಿಕ ಸಂಬಂಧವೂ ಚನ್ನಾಗಿದ್ದವು ಶ್ರೀ ಬ್ರಹ್ಮಣ್ಯತೀರ್ಥರ ತಾಯಿಯ ತಂಗಿಯೇ ಶ್ರೀಪಾದರಾಯರ ತಾಯಿಯಾಗಿದ್ದಳು

ಶ್ರೀ ಬ್ರಹ್ಮಣ್ಯತೀರ್ಥರು ಮುಂದೆ ಶ್ರೀ ವ್ಯಾಸತೀರ್ಥರನ್ನು ಮುಂದಿನ ವಿದ್ಯಾವ್ಯಾಸಂಗಕ್ಕೆಂದು ಈ ಶ್ರೀಪಾದರಾಯರಲ್ಲಿಗೆ ಕಳಿಸಿಕೊಡುವವರಾದರು ಅಲ್ಲಿ ಶ್ರೀ ವ್ಯಾಸತೀರ್ಥರು ಸುಧಾದಿ ಸಕಲಶಾಸ್ತ್ರಗಳನ್ನು ವ್ಯಾಸಂಗಮಾಡಿ ಪಾಂಡಿತ್ಯವನ್ನು ಸಂಪಾದಿಸುವವರಾದರು.

ಶ್ರೀ ವ್ಯಾಸತೀರ್ಥರಲ್ಲಿ ಶ್ರೀಪಾದರಾಯರದು ಬಹಳ ಜೀವ, ತುಂಬಾ ಪ್ರೇಮ, ತಮ್ಮಲ್ಲಿ ಯಾವ ವಿದ್ವಾಂಸರಾದರೂ ವಾಗ್ವಾದಕ್ಕೆ ಬಂದರೆ, ಮೊದಲು ಶ್ರೀ ವ್ಯಾಸತೀರ್ಥರನ್ನೇ ಬಿಡುತ್ತಿದ್ದರು ಅವರ ಮೇಲೆ! ಒಮ್ಮೆ ಒಬ್ಬ ರಾಜನು ಒಬ್ಬ ಅದ್ವೈತ ವಿದ್ವಾಂಸನೊಡನೆ ವಾಗ್ಯುದ್ಧಕ್ಕೆ ಶ್ರೀಪಾದರಾಯರನ್ನು ಆಹ್ವಾನಿಸುವವನಾದನು. ಮಾಮೂಲಿನಂತೆ ಶ್ರೀ ವ್ಯಾಸತೀರ್ಥರನ್ನೇ ಅಲ್ಲಿ ವಾದಿ ದಿಗ್ವಿಜಯಕ್ಕೆ ಕಳಿಸಿಕೊಡುವವರಾದರು. ಆಗ ಆಶ್ರಮ ಗುರುಗಳಾದ ಶ್ರೀ ಬ್ರಹ್ಮಣ್ಯತೀರ್ಥರೂ, ಮತ್ತು ಶ್ರೀ ವಿದ್ಯಾಗುರುಗಳಾದ ಶ್ರೀಪಾದರಾಯರೂ ವಾದಕ್ಕೆ ಸನ್ನಿಹಿತರಾಗಿದ್ದರು. ಶ್ರೀ ವ್ಯಾಸರಾಯರು, ತಮ್ಮ ಸಿದ್ಧಾಂತ ಸಾರಾಂಶ ಸೂತ್ರವಾದ, ಶ್ರೀಮನ್ಮಧ್ವಮತೇ ಹರಿಃ ಪರತರಃ ಸತ್ಯಂ ಜಗತ್ ತತ್ತ್ವತಃ। ಭೇದೋ ಜೀವಗಣಾಹರೇರನುಚರಾಃ ನೀಚೋಚ್ಚಭಾವಂಗತಾಃ॥ ಮುಕ್ತಿರ್ನೈಜಸುಖಾನುಭೂತಿರಮಲಾಭಕ್ತಿಶ್ಚ ತತ್ಸಾಧನಂ। ಹ್ಯಕ್ಷಾದಿತ್ರಿತಯಂ ಪ್ರಮಾಣಮಖಿಲಾಮ್ನಾಯೈಕವೇದ್ಯೋ ಹರಿಃ ॥ ಈ ಶ್ಲೋಕಾಸ್ತ್ರದಿಂದ, ಆ ವಾದಿಯನ್ನು ಸೋಲಿಸಿ ಪರಾಜಯಗೊಳಿಸಿ, ಶ್ರೀ ಮಧ್ವಸಿದ್ಧಾಂತ ಪತಾಕೆಯನ್ನು ಮೇಲೆತ್ತಿ ಮೆರೆಯಿಸುವವರಾದರು. ಆ ಉಭಯ ಗುರುಗಳೂ

ಶಿಷ್ಯನ ಅಮೋಘವಾದ ವೈಭವವನ್ನು ಕಂಡು ತುಂಬಾ ಸಂತೋಷಪಡುವವರಾದರು

ಶ್ರೀ ವ್ಯಾಸರಾಯರು ಶ್ರೀಪಾದರಾಜರಲ್ಲಿ ವಿದ್ಯಾಭ್ಯಾಸಂಗ ನಡೆಸುತ್ತ, ಗ್ರಂಥರಚನಾ ಕಾರ್ಯವನ್ನೂ ಮಾಡತೊಡಗಿದರು ಇವುಗಳೊಳಗೆ (೧) ನ್ಯಾಯಾಮೃತ, (೨) ತರ್ಕತಾಂಡವ ಮತ್ತು (೩) ತಾತ್ಪರ್ಯ ಚಂದ್ರಿಕೆಗಳು ವ್ಯಾಸತ್ರಯಗಳೆಂದು ಪ್ರಸಿದ್ಧವಾಗಿರುತ್ತವೆ, ಶ್ರೀ ಕೃಷ್ಣನ ಭಾಂಡಾರದಲ್ಲಿ. ಹೀಗೆ ೧೨ ವರ್ಷ ಕಾಲ ಶ್ರೀ ವ್ಯಾಸತೀರ್ಥರು, ಮುಳಬಾಗಿಲಿನಲ್ಲಿ ನೆಲೆಸಿದ್ದರು

ಮುಂದೆ ಶ್ರೀ ಬ್ರಹ್ಮಣ್ಯತೀರ್ಥರು, ಶ್ರೀಪಾದರಾಯರು ಮತ್ತು ಶ್ರೀ ವ್ಯಾಸತೀರ್ಥರು ಈ ಯತಿತ್ರಯರು ಪಂಢರಪುರಾದಿ ಕ್ಷೇತ್ರಗಳನ್ನು ಸಂಚರಿಸುತ್ತ ಪ್ರವಶ್ಯಪಲ್ಲಿ ಎಂಬ ಶ್ರೀ ಬ್ರಹ್ಮಣ್ಯತೀರ್ಥರ ಪೂರ್ವಾವಾಸಸ್ಥಳಕ್ಕೆ ದಯಮಾಡಿಸುವವರಾದರು ಈ ಯತಿತ್ರಯ ಸಂಗಮದ ಸ್ಮರಣಾರ್ಥವಾಗಿ, ಶ್ರೀ ವ್ಯಾಸರಾಯರು, ಆ ಪ್ರವಶ್ಯಪಲ್ಲಿಯೊಳಗೆ ಶ್ರೀ ಮಾರುತೀ ಪ್ರತಿಮೆಯನ್ನು ಪ್ರತಿಷ್ಠಾಪನ ಮಾಡಿದರು ಇದೇ ಮೊದಲನೇ ಮಾರುತೀ ಸ್ಥಾಪನೆ ಇವರದು

ಪಂಢರಪುರದಲ್ಲಿರುವಾಗ್ಗೆ ಶ್ರೀ ವ್ಯಾಸರಾಯರಿಗೆ ಒಂದು ಸ್ವಪ್ನದೃಷ್ಟಾಂತವಾದ ಮೇರೆಗೆ, ದ್ವಾಪರಯುಗದಲ್ಲಿ ಸತ್ಯಭಾಮಾ ಹಾಗು ಅರ್ಜುನರಿಂದ ಪೂಜಿಸಲ್ಪಟ್ಟು, ಪರಂಪರೆಯಿಂದ ಕ್ಷೇಮಕರಾಜನ ವರೆಗೆ ಬಂದು, ಆತನಿಂದ ಭೂಸ್ಥಾಪನೆ ಮಾಡಲ್ಪಟ್ಟಿದ್ದ, ಶ್ರೀ ರುಕ್ಮಿಣೀ ಸತ್ಯಭಾಮಾ ಸಮೇತವಾದ ಶ್ರೀ ಗೋಪಾಲಕೃಷ್ಣನ ವಿಗ್ರಹಗಳನ್ನು, ಚಂದ್ರಭಾಗಾ ಹಾಗು ಪುಷ್ಪವತೀ ನದೀ ಸಂಗಮದ ಸ್ಥಳದಲ್ಲಿ ಹೂಳಿದ್ದವುಗಳನ್ನು, ಅಂದರೆ ಪೆಟ್ಟಿಗೆಯನ್ನು ತಂದು ಶ್ರೀಪಾದರಾಯರಿಗೆ ಒಪ್ಪಿಸುವವರಾದರು. ಆದರೆ ಅದರ ಮುಚ್ಚಳವು ಭದ್ರವಾಗಿದ್ದುದರಿಂದ ಎಷ್ಟೋ ಕಾಲ, ಆ ಪೆಟ್ಟಿಗೆಗೇನೇ ಪೂಜೆ ನಡೆಯುತ್ತಿತ್ತು ಮಠದಲ್ಲಿ

ಮುಂದೆ ಒಂದಾನೊಂದು ದಿನ ಶ್ರೀಪಾದರಾಯರು ತಮ್ಮ ಶಿಷ್ಯರಾದ ಶ್ರೀ ವ್ಯಾಸರಾಯರಿಗೆ, ದೇವತಾರ್ಚನೆ ಮಾಡಲು ವಿಧಿಸುವವರಾದರು.

ಮುಂದೆ ಯಾತ್ರಿಕರಾಗಿ ಸಂಚರಿಸುತ್ತ, ಶ್ರೀ ವ್ಯಾಸರಾಯರು ದಿಲ್ಲಿ ನಗರಕ್ಕೆ ಬರುವವರಾದರು. ಅಲ್ಲಿ ಆಗ ಬಹಲೂಲ ಲೋಡಿ ಎಂಬವನು ರಾಜನಾಗಿದ್ದನು.

ಅಲ್ಲಿ ಊರ ಹೊರಗಿನ ಉದ್ಯಾನದಲ್ಲಿ ಇಳಿದುಕೊಂಡರು. ಅಲ್ಲಿಯೇ ಕೊಳದಲ್ಲಿ ಸ್ನಾನಮಾಡಿಕೊಂಡು, ಉದ್ಯಾನದ ಒಂದು ಸ್ವಚ್ಛವಾದ ಕಟ್ಟೆಯ ಮೇಲೆ ತಮ್ಮ ದೇವರ ಪೆಟ್ಟಿಗೆಯನ್ನು ಸ್ಥಾಪಿಸುವವರಾಗಿಬಿಟ್ಟರು ಇದನ್ನು ಕಂಡು, ಅಲ್ಲಿದ್ದ ಸುಲ್ತಾನನ ಕೆಲ ಸೇವಕ ಜನರು ಆಚ್ಚರಿಗೊಂಡು, ಸ್ವಾಮಿಗಳಿಗೆ,

ಸೇವಕರು.– ಸ್ವಾಮೀ, ಈ ಕಟ್ಟೆಯು ಕೆಲ ದಿನಗಳ ಹಿಂದೆ ಸತ್ತು ಹೋದ ಸುಲ್ತಾನನ ಮಗನ ಗೋರಿಯು! ತಮಗೆ ಪೂಜೆಗೆ ...ನಡೆಯಬಹುದೇ ಎಂಬುದನ್ನು ನೋಡಿಕೊಳ್ಳಬೇಕು

ಶ್ರೀ — (ಏನೇನೂ ಅಪ್ರತಿಭರಾಗದೆ) ಇಲ್ಲ, ಇಲ್ಲ, ಆ ಸುಲ್ತಾನನ ಸುತನು ಸತ್ತಿರುವದಿಲ್ಲ, ಅನನಿಗೆ ಜೀವವಿದೆ, ಅವನು ಮಲಗಿದ್ದಾನೆ.

ಎಲ್ಲರಿಗೂ ಸೋಜಿಗವಾಗಿ, ಕೂಡಲೇ ಸೊಲ್ತಾನನೆಡೆಗೆ ಧಾವಿಸಿ ಹೋದರು ಅವನಿಗೆಲ್ಲ ಸಮಾಚಾರ ಹೇಳಿದರು ಅವನೂ ಚಕಿತನಾಗಿ, ಶ್ರೀಗಳಿದ್ದೆಡೆಗೆ ಓಡಿಬರುವವನಾದನು.

ಸುಲ್ತಾನನು.– ಏನಿದು ಸಮಾಚಾರ?

ಶ್ರೀ — ನಿನ್ನ ಮಗನು ಸತ್ತಿಲ್ಲ. ಅವನಿನ್ನೂ ನಿದ್ರಿಸಿದ್ದಾನೆ. ರಾಜನಿಗಂತೂ ತುಂಬಾ ಆಶ್ಚರ್ಯವಾಗಿ, ಬಾಯಲ್ಲಿ ಬೆರಳನ್ನೇ ಇಟ್ಟುಕೊಂಡನು.

ಆ ಮೇಲೆ ಆ ಗೋರಿಯ ಕಟ್ಟೆಯನ್ನು ಅಗಿಸಿ ನೋಡಲಾಗಿ, ರಾಜಕುಮಾರನು ನಿದ್ರೆಯಿಂದೆಚ್ಚತ್ತಂತೆ, ಕಣ್ಣುತಿಕ್ಕಿಕೊಳ್ಳುತ್ತ ಎದ್ದೇ ಕುಳಿತುಬಿಟ್ಟನು, ಶ್ರೀ ವ್ಯಾಸತೀರ್ಥರ ವಾಣಿಯಂತೆ! ಎಲ್ಲರೂ ಸಂತೋಷಗೊಂಡು, ಶ್ರೀಗಳ ಅಗಾಧಮಹಿಮೆಯನ್ನು ಹೊಗಳುತ್ತ ರಾಜಕುವರನೊಡನೆ, ಅರಮನೆಗೆ ತೆರಳುವವರಾದರು

ಶ್ರೀ ವ್ಯಾಸ ಮಹಾನುಭಾವರ ಮಹಿಮಾತಿಶಯವನ್ನು ಕಂಡುಕೊಂಡು, ಸುಲ್ತಾನನು, ಒಳ್ಳೇ ಭಕ್ತಿ ನಿಷ್ಠೆಯಿಂದ ಶ್ರೀಗಳಿಗೆ ಧನಕನಕವಸ್ತ್ರಾದಿಗಳನ್ನು ಕಾಣಿಕೆಯಾಗಿ ಕೊಡುವವನಾದನಲ್ಲದೇ, ಆನೆ, ಒಂಟೆಯಾದಿಗಳನ್ನೂ ಅವುಗಳ ಮೇಲೆ ಬಾರಿಸಲು ನಗಾರಿಗಳನ್ನೂ, ಹಸರು ಬಣ್ಣದ ನಿಶಾನೆ ಛತ್ರಿಗಳನ್ನೂ ಕೊಟ್ಟು ಸನ್ಮಾನಿಸಿ ತುಂಬಾ ಗೌರವದಿಂದ ಅವರನ್ನು ಬೀಳ್ಕೊಡುವವನಾದನು.

ನಂತರ, ಶ್ರೀ ವ್ಯಾಸರಾಯರು ಸಮಸ್ತ ರಾಜಸಾಮ್ರಾಜ್ಯವೈಭವ ವಿಜೃಂಭಣೆಯಿಂದ ಸಂಚಾರ ಮಾಡುತ್ತ, ದಕ್ಷಿಣದಲ್ಲಿ ಶ್ರೀರಂಗ ಕ್ಷೇತ್ರಕ್ಕೆ ಬರುವವರಾದರು

ಶ್ರೀರಂಗಶೈವಭಕ್ತರು — ಸ್ವಾಮೀ ಇದು ಶೈವ ಕ್ಷೇತ್ರವು, ಇದು ಜಂಬುಕೇಶ್ವರ ಸ್ಥಾನವು, ತಮ್ಮಂಥ ವೈಷ್ಣವರಿಗೆ ಇದು ಪ್ರವೇಶಪ್ರಾಪ್ತವಲ್ಲ

ಶ್ರೀ -- ಇಲ್ಲ, ಶ್ರೀ ಜಂಬುಕೇಶ್ವರ ಹಾಗು ಶ್ರೀ ರಂಗೇಶ ಇವರೀರ್ವರ ಸನ್ನಿಧಾನವಿದೆ. ಇದು ಶೈವ ಹಾಗು ವೈಷ್ಣವರೀರ್ವರಿಗೂ ಯಾತ್ರಾ ಕ್ಷೇತ್ರವಾಗಿದೆ. ಹೀಗೆ ನಮಗೆ ವೃಥಾ ತೊಂದರೆಕೊಡಬಾರದು, ಶೈವ ಮತ್ತು ವೈಷ್ಣವರೆಂಬ ಬುದ್ಧಿಭೇದ ತಂತ್ರ ಹೂಡಬಾರದು ಯಾತ್ರಿಕರಿಗೆ!

ಶ್ರೀರಂಗ.– ಹಾಗಾದರೆ, ಉಭಯ ದೇವಸ್ಥಾನಗಳ ಸರಹದ್ದುಗಳ ನಿಷ್ಕರ್ಷವು ಹೇಗೆ?

ಶ್ರೀ:— ಸರಿ! ನಾನು ಶ್ರೀ ರಂಗನಾಥ ದೇವಾಲಯದಿಂದ ಅಲ್ಲಿಯ ಶ್ರೀ ಜಂಬುಕೇಶ್ವರನ ದೇವಾಲಯದ ವರೆಗೆ, ಉಸಿರುಕಟ್ಟಿ ಓಡುತ್ತೇನೆ, ಅಂದರೆ ಎಲ್ಲಿ ನಾನು ಉಸಿರು ಬಿಡುವೆನೋ, ಅದೇ ಆ ಆ ದೇವಾಲಯಗಳ ಎಲ್ಲೆಗಳೆಂದು ಪಾಲಿಸಬೇಕು, ಉಭಯಮತೀಯರೂ!

ಹೀಗೆ ಉಸಿರಿನ ಪ್ರಮಾಣದಿಂದಲೇ ಅಲ್ಲಿ ಶೈವ ಹಾಗು ವೈಷ್ಣವ ಕ್ಷೇತ್ರಗಳ ಸರಹದ್ದುಗಳನ್ನು ಸ್ಥಾಪಿಸುವವರಾದರು, ಶ್ರೀ ವ್ಯಾಸತೀರ್ಥರು.

ಮುಂದೆ ಕಂಚಿ ಶ್ರೀಶೈಲಗಳ ಕಡೆಗೆ ಸಂಚಾರ ಕೈಕೊಂಡು, ಶ್ರೀ ಭೂವೈ
ಕುಂಠವೆಂದು ಹೆಸರುವಾಸಿಯಾದ ಶ್ರೀ ತಿರುಪತಿಗೆ ಬರುವವರಾದರು ಆ
ಅಲ್ಲಿ ಅರ್ಚಕರ ಪ್ರಾಬಲ್ಯ ಬಹಳವಾಗಿ, ಎಲ್ಲರಿಗೂ ಬೇಜಾರುಗೊಳಿಸಿಬಿಟ್ಟಿ
ದ್ದರು ತಮ್ಮ ಉನ್ಮತ್ತ ನಡಾವಳಿಯಿಂದ ದೇವತಾರ್ಚನೆಯನ್ನು ತಮ್ಮ
ಸ್ವಾರ್ಥಸಾಧನೋಪಾಯವನ್ನು ಮಾಡಿಕೊಂಡುಬಿಟ್ಟಿದ್ದರು, ಅಲ್ಲಿಯ ಅರ್ಚ
ಕರು ಈ ಅರ್ಚಕರ ಮದೋನ್ಮತ್ತ ವರ್ತನೆಯನ್ನು ಕೇಳಿ ಅಲ್ಲಿ ಬೆಟ್ಟದ ಕೆ
ಗಿದ್ದ ರಾಜನು ಕೋಪಗೊಂಡು, ಆ ಮದಾಂಧ ಅರ್ಚಕರ ವಂಶವನ್ನೇ ನಾ
ಮಾಡಿಸಿಬಿಟ್ಟನು ಹೀಗೆ ಪ್ರಾಣಭಯದಿಂದ ಮುಂದೆ ಶ್ರೀನಿವಾಸನ ಪೂ
ಗೇನೇ ಯಾರೂ ಮುಂದೆ ಬರಲಾರರಾದರು ದೇವರ ಪೂಜೆಗೆ ಪೂಜಾರರೆ
ಸಿಗಲಾರರಾದರು

ಶ್ರೀ ವ್ಯಾಸತೀರ್ಥರು ಬೆಟ್ಟ ಏರುವಾಗ್ಗೆ ಕಲ್ಲು, ಬಂಡೆ, ಸೋಪಾನಗಳೆ
ಸಾಲಿಗ್ರಾಮಸ್ವರೂಪವಾಗಿ ಕಾಣತೊಡಗಿದವು. "ಸರ್ವಂ ವಾಸುದೇ
ಮಯಂ" ಎಂಬಂತೆ ಪಾದ ಇಟ್ಟು ಹತ್ತುವದೇ ಅವರಿಗೆ ಪೈಮೇಲೆ ಬಂತು
"ವಾಸುದೇವಃ ಸರ್ವಂ ಇತಿ ಸಮಹಾತ್ಮಾ ಸುದುರ್ಲಭಃ" ಎಂಬಂತೆ
ಮಹಾತ್ಮರು, ತಮ್ಮ ಮಂಡಿಗಳಿಂದಲೇ ಆ ವೆಂಕಟೇಶಗಿರಿ ಏರುತ್ತ, ಕೊನೆ
ಮಂಡಿಗಳಿಂದಲೇ ಶಿಖರವನ್ನು ಮುಟ್ಟುವವರಾದರು.

ಆ ರಾಜನು ಇವರ ಅಗಾಧಮಹಿಮೆ ಹಾಗು ದೇವ ವರ್ಚಸ್ಸುಗಳನ್ನ
ಕಂಡು ಇವರನ್ನೇ ಶ್ರೀನಿವಾಸ ದೇವರ ಪೂಜೆ ನಡೆಯಿಸಬೇಕಾಗಿ ಬಹುಪ
ಹೇಳಿಕೊಳ್ಳುವವನಾದನು

ಆ ರಾಜನ ಕೋರಿಕೆಯೇ ಶ್ರೀ ಭಗವದಾಜ್ಞೆಯಾಗಿ ಗ್ರಹಿಸಿ
ಶ್ರೀ ಶ್ರೀನಿವಾಸ ದೇವರ ಪೂಜೆಯ ಹೊಣೆಯನ್ನೂ ಹೊತ್ತುಕೊಂಡರು ಹೆಗ
ಮೇಲೆ ಆಗ ಶ್ರೀ ವ್ಯಾಸತೀರ್ಥರು ಇದು ವರೆಗೆ ತಾವು ವಾದಿ ದಿಗ್ವಿಜಯ
ದಿಂದ ಸಂಪಾದಿಸಿಕೊಂಡಿದ್ದ ಜಯಪತ್ರಿಕೆ ಕಾಣಿಕೆಗಳನ್ನೆಲ್ಲ ಶ್ರೀಹರಿಗೆ ಒಪ್ಪಿಸಿ
ಸಮರ್ಪಿಸುವವರಾದರು. ಹೀಗೆ ಹನ್ನೆರಡು ವರ್ಷ ಕಾಲ ಶ್ರೀ ತಿರುಪತಿ
ತಿಮ್ಮಪ್ಪನ ಪೂಜಾರಾಧನೆಗಳನ್ನು ಮನಪಣಿ ಮಾಡಿ ಕೃತಾರ್ಥತೆ ಪಡೆದರು
ನಂತರ ಹಿಂದೆ ನಶಿಸಿಹೋದ ಆ ಅರ್ಚಕರ ವಂಶದ ಒಂದು ಗಂಡು ಶಿಶು

ಆರು ವರ್ಷ ಆಡಳಿತವಾದ ನಂತರ ೧೫೦೯ ರಲ್ಲಿ ಶ್ರೀ ಕೃಷ್ಣದೇವರಾಯನಿಗೆ ವಿಜಯನಗರದ ಸಿಂಹಾಸನ ಪಟ್ಟಾಭಿಷೇಕವಾಯಿತು

ಈ ಕೃಷ್ಣದೇವರಾಯನು, ಸ್ವತಃ ವಿದ್ವಾಂಸನೂ, ಒಳ್ಳೇ ಕವಿಯೂ ಆಗಿದ್ದನು ವಿದ್ವಾಂಸರಿಗೆಲ್ಲ ಒಳ್ಳೇ ಆಶ್ರಯಸ್ಥಾನನಾಗಿದ್ದನು ಅಂದ ಮೇಲೆ ಶ್ರೀ ವ್ಯಾಸಪ್ರಭೃತಿಗಳಲ್ಲಿ ಇವನಿಗಿದ್ದ ಗೌರವಾಭಿಮಾನಗಳ ಬಗೆಗೆ ಹೇಳುವದೇನು?

ವಿಜಯನಗರದಲ್ಲಿ ಆಗ ಬ್ರಹ್ಮ ಹಾಗು ಕ್ಷತ್ರ ತೇಜಸ್ಸುಗಳ ದಿವ್ಯ ಬೆಳಕೇ ಬೆಳಗುತ್ತಿತ್ತೆಂದರೆ ಅತಿಶಯೋಕ್ತಿಯಾಗಲಾರದು! ಶ್ರೀ ರಾಜಗುರುಗಳ ಅಗಾಧ ಮಹಿಮಾತಿಶಯವನ್ನು ಕಂಡುಕೊಳ್ಳುವವನಾಗಿ, ಶ್ರೀ ಕೃಷ್ಣದೇವರಾಜನು, ಶ್ರೀ ವ್ಯಾಸರಾಜರನ್ನು ಸುವರ್ಣ ಸಿಂಹಾಸನದ ಮೇಲೆ ಕೂಡ್ರಿಸಿ, ಸುವರ್ಣ ಕಲಶದಿಂದ ನವರತ್ನಾಭಿಷೇಕವನ್ನು ಮಾಡಿಸಿದನು. ಆ ರತ್ನಗಳನ್ನು ಹಿಡಿಹಿಡಿಯಾಗಿ, ಆ ರಾಜಗುರುಗಳು ಎಲ್ಲರಿಗೂ ದಾನ ಮಾಡುವವರಾದರು!

ಹೀಗೆ ಶ್ರೀ ಜನತಾಜನಾರ್ದನ ಸೇವಾರೂಪವಾದ ರಾಜ್ಯಕಾರಭಾರವನ್ನು ಸರ್ವ ಜನರು ಸಂತೋಷಿಸುವಂತೆ ಸಾಗಿಸುತ್ತ ಕೆಲಕಾಲ ಉರುಳಿತು.

ವಿಜಯನಗರ ರಾಜ್ಯಕ್ಕೂ, ರಾಜನಾದ ಶ್ರೀ ಕೃಷ್ಣದೇವರಾಯನಿಗೂ ಒಂದು ಕುಯೋಗ ಪ್ರಾಪ್ತವಾಯಿತು. ಎಲ್ಲ ಜ್ಯೋತಿಷಿಗಳೂ ಕೂಡಿ ಲೆಕ್ಕ ಹಾಕಿ, ಕ್ರಿ. ಶ ೧೫೨೩ ನೇ ನವ್ಹಂಬರ ೭ ನೇ ದಿನ ಒಂದು ಮಹಾ ಕುಹಕ ಯೋಗವು ಪ್ರಾಪ್ತವಾಗಲಿದೆಯೆಂದು ನಿಷ್ಕರ್ಷಿಸುವವರಾದರು

ಹೀಗೆ ಎಲ್ಲರೂ ರಾಜ್ಯದಲ್ಲಿ ಈ ಅರಿಷ್ಟ ನಿವಾರಣೆಗಾಗಿ ಬಗೆಬಗೆಯ ವಿಚಾರಗಳಲ್ಲಿ ಮುಳುಗಿಬಿಟ್ಟು, ತುಂಬಾ ಚಿಂತೆಗೊಳಗಾದರು. ಶ್ರೀ ವ್ಯಾಸ ಮಹಾತ್ಮರು, ಇದನ್ನೆಲ್ಲ ಕೇಳಿಕೊಂಡರು. ತಾವೇ ಆಗ ಆ ವಿಷಕಾಲದಲ್ಲಿ ವಿಜಯನಗರದ ಸಿಂಹಾಸನವನ್ನೇರಿ, ಅಲಂಕರಿಸಿ, ಬಂದ ರಾಜ-ರಾಜ್ಯ ಕಂಟಕವನ್ನು ನಿವಾರಿಸಿ, ದುರ್ಯೋಗವನ್ನು ಅಳಿಸಲು ಸಿದ್ಧರಾದರು. ಈ ದುರ್ಮುಹೂರ್ತದಲ್ಲಿ ರಾಜ್ಯಾರೋಹಣವನ್ನು ಯಾರು ಮಾಡಬೇಕೆಂದು ನಿಷ್ಕರ್ಷಿಸಲು ಒಂದು ಆನೆಯ ಸೊಂಡಿಲಿನಲ್ಲಿ ಪುಷ್ಪಹಾರವನ್ನು ಕೊಟ್ಟು, ಅದು ಯಾರ

ಕೊರಳಿಗೆ ಆ ಹಾರ ಹಾಕುವದೋ ಅವರೇ ರಾಜ್ಯಾರೋಹಣ ಮಾಡಬೇಕಾಗಿ ಎಲ್ಲರ ನಿರ್ಧಾರವಾಯಿತು ಆ ರಾಜಗಜವು, ಒಂದಲ್ಲ ಎರಡಲ್ಲ ಮೂರು ಸಲವೂ, ಆ ಹಾರವನ್ನು ಶ್ರೀ ವ್ಯಾಸರಾಯರ ಕೊರಳಲ್ಲಿಯೇ ಹಾಕಿತು. ಅಂದ ಮೇಲೆ ಶ್ರೀ ವ್ಯಾಸರಾಯರೇ ರಾಜ್ಯರಕ್ಷಣೆಗೆ ಗತಿಯಾದರು ಸಿಂಹಾಸನಾರೋಹಣಕ್ಕೆ ಮೊದಲು, ಯತೀಂದ್ರರು, ಶ್ರೀನಿವಾಸನನ್ನು ಚಿಂತಿಸಿ, ಧ್ಯಾನಿಸುವವರಾಗಿ, ಆ ಅರಿಷ್ಟಯೋಗದ ಶೌರ್ಯವನ್ನೂ ಹಾಗು ತಮ್ಮ ತೇಜೋಪ್ರಭಾವವನ್ನೂ ತಿಳಿದುಕೊಂಡವರಾಗಿ, ತಮ್ಮ ಶಾಟಿಯನ್ನು ಸುತ್ತಿ ಉಂಡೆಮಾಡಿ, ಆ ರಾಜಸಿಂಹಾಸನದ ಮೇಲೆ ಎಸೆದುಬಿಟ್ಟರು ಆಗ ಅದು ಆ ವಿಷನಿಮಿಷಕ್ಕನುಗುಣವಾಗಿ, ಝುಗ್ಗನೇ ಉರಿ ಎದ್ದು, ಜ್ವಾಲಾಕಾರ ವಾಗಿ ಉರಿದುಹೋಯಿತು! ಅರಿಷ್ಟ ಪರಿಹಾರವಾಯಿತು, ಬಂದ ಸಂಕಟ ನಿವಾರಣೆಯಾಯಿತು, ಶ್ರೀ ಗುರುಹಿರಿಯರ ಕೃಪಾಪ್ರಸಾದವಾಗಿ! ಕೂಡಲೇ ಶ್ರೀ ವ್ಯಾಸರಾಜರು, ಧೀರರಾಜಸಿಂಹರಂತೆ, ಗಂಭೀರವಾಗಿ, ವಿಜಯನಗರದ ಸಿಂಹಾಸನವನ್ನೇರುವವರಾದರು ಲೋಕೋದ್ಧಾರಕ್ಕಾಗಿ! ಬಂದಿಮಾಗಧರು, ವಿದ್ಯಾನಗರ ಕರ್ನಾಟಕ ಸಿಂಹಾಸನಾಧೀಶ್ವರ, ಸರ್ವ ವೈಷ್ಣವಶೇಖರ, ಶ್ರೀ ವ್ಯಾಸರಾಜಪ್ರಭೋ ಜಯಜಯ"ವೆಂದು ಜಯಘೋಷ ಮಾಡುವವ ರಾದರು.

ಹೀಗೆ ಶ್ರೀ ವ್ಯಾಸರಾಜರು ಮೂರುಮುಕ್ಕಾಲು ಗಳಿಗೆ ವಿಜಯನಗರದ ರಾಜ್ಯಗದ್ದಿಗೆ ಏರಿ ಅಲಂಕರಿಸಿ, ವಿಶೇಷ ದಾನಧರ್ಮಾದಿಗಳನ್ನು ಕೊಡುಗೈ ಯಿಂದ ನೀಡಿ, ಬಂದ ಕುಯೋಗವನ್ನೀಡಾಡಿ, ಲೋಕಕಲ್ಯಾಣ ಮಾಡುವವ ರಾದರು ಆ ಕಾಲಕ್ಕೆ ಗೋಭೂಹಿರಣ್ಯಾದಿ ಸಕಲ ದಾನಮಾಡಿ, ಬ್ರಾಹ್ಮಣ ರನ್ನೂ ಆರ್ತ ಅನಾಥ ವರ್ಗವನ್ನೂ ಸಂತೈಸಿ ಸಂತೋಷಿಸುವವರಾದರು

ಶ್ರೀ ವ್ಯಾಸರಾಯರಿಗೆ ಕೃಷ್ಣದೇವರಾಯನು "ವ್ಯಾಸಸಮುದ್ರ"ವೆಂಬ ಮಹಾ ಸರೋವರವನ್ನು-ಕೆರೆಯನ್ನು ಕ್ರಿ. ಶ. ೧೫೨೪-೨೫ ರಲ್ಲಿ ಕಟ್ಟಿಸಿ ದಾನ ವಾಗಿ ಕೊಟ್ಟನು.

ಶ್ರೀ ವ್ಯಾಸತೀರ್ಥರು ಪಾಪಘ್ನೀ ನದೀತೀರದ "ಕಂದಕೂರ" ಎಂಬ ಗ್ರಾಮಕ್ಕೆ ದಯಮಾಡಿಸಿದರು. ಅಲ್ಲಿಯ ಜನರೆಲ್ಲ ನೀರಿಗಾಗಿ ಕಣ್ಣೀರು

ಸುರಿಸುತ್ತ ಬಲು ಬವಣೆಬಡುತ್ತಿರುವವನ್ನು ಕಂಡು ತುಂಬಾ ವ್ಯಾಕುಲ ಗೊಂಡರು. ಅಲ್ಲಿ ಆ ಜಲಾರ್ತ ಜನರಿಗಾಗಿ ಒಂದು ಕೆರೆಯನ್ನೇ ಕಟ್ಟಿಸಿ ಕೊಟ್ಟು ಲೋಕೋಪಕಾರ ಮಾಡುವವರಾದರು. ಒಬ್ಬ ದುಂಬ ಬ್ರಾಹ್ಮಣನು ಶ್ರೀಗಳೆಡೆಗೆ ಬಂದು ತನಗೆ ಮಂತ್ರೋಪದೇಶಮಾಡಬೇಕೆಂದು ದುಂಬಾಲು ಬಿದ್ದನು. ಸ್ವಾಮಿಗಳು ಅವನಿಗೆ "ಯಾಹಿ ಮಹಿಷ ಪೋಗೋ ಕೋಣಾ" ಈ ಮಂತ್ರ ಕೊಡುವವರಾದರು. ಅವನು ಒಳ್ಳೇ ಭಕ್ತಿ ವಿಶ್ವಾಸಗಳಿಂದ ಅದನ್ನೇ ಧ್ಯಾನಿಸಿ, ಅದರ ಮೂಲಕ ಯಮದೇವರ ಕೋಣವನ್ನೆ ಪ್ರತ್ಯಕ್ಷೀಕರಿಸಿ ಕೊಂಡನು. ಇದನ್ನು ಕೇಳಿ ಶ್ರೀಗಳು ತುಂಬಾ [illegible], ಆ ಬ್ರಾಹ್ಮಣನನ್ನು ಅನುಗ್ರಹಿಸಿ, ಉದ್ಧರಿಸಿ, ಒಳ್ಳೇ ವಿದ್ವಾಂಸನನ್ನಾಗಿ ಮಾಡಿ ದರು. ಭಾವಕ್ಕೆ ಪ್ರತಿಫಲ ಬೆನ್ನು ಹಿಂದೇ ಇರುತ್ತದೆ!

ಶ್ರೀ ವ್ಯಾಸಮುನಿಗಳು ಕರ್ನಾಟಕ ಸಿಂಹಾಸನದ ಗುರುಸ್ಥಾನವನ್ನು ವಿರಾಜಮಾನರಿದ್ದಾಗ್ಗೆ, ಅನೇಕಾನೇಕ ವಿದ್ವಾಂಸರೂ, ಕವಿಗಳೂ, ಧಾರ್ಮಿ ಕರೂ, ಭಕ್ತರೂ, ಇವರ ಸನ್ನಿಧಿಯಾಶ್ರಯವನ್ನವಲಂಬಿಸಿ, ಇಡೀ ರಾಜ್ಯವನ್ನೇ ಕೀರ್ತಿಶಿಖರಕ್ಕೆ ಮುಟ್ಟಿಸಿದರು. ಬರೀ ಸಂನ್ಯಾಸಿಗಳ ಸಂಖ್ಯೆಯೇ ಮೂವತ್ತು ಮೀರಿತ್ತಂತೆ. ಅವರೊಳಗೆ ಶ್ರೀ ಉತ್ತರಾದಿಮಠದ ಶ್ರೀ ರಘುನಂದನ ತೀರ್ಥರು, ಶ್ರೀ ಸುರೇಂದ್ರತೀರ್ಥರು, ಶ್ರೀ ವಿಜಯೀಂದ್ರತೀರ್ಥರು, ಶ್ರೀ ವಾದಿ ರಾಜರು ಮತ್ತು ಶ್ರೀ ಲಕ್ಷ್ಮೀಕಾಂತರು, ಇವರು ಪ್ರಮುಖರಾಗಿದ್ದರು. ಹಾಗು ಶ್ರೀ ಪುರಂದರದಾಸ ಶ್ರೇಷ್ಠರೂ ಇವರ ಶಿಷ್ಯತ್ವವಹಿಸಿ, ಶ್ರೀ ಕನಕ ದಾಸರೂ ಬಂದು ಶಿಷ್ಯರಾಗಿ ಕರ್ನಾಟಕದ ಕೀರ್ತಿಗೆ ಮತ್ತಷ್ಟು ಕಳೆಕಟ್ಟಿದರು. ಶ್ರೀ ವೈಷ್ಣವ ಸಿದ್ಧಾಂತಗಳನ್ನೆಲ್ಲ ಜನಸಾಮಾನ್ಯರಿಗೆ, ಸುಲಲಿತವಾಗಿ ಬೋಧಿ ಸುತ್ತ, ಭಗವತ್ಕಾರ್ಯದಲ್ಲಿ ತುಂಬಾ ನಾಯಕರಾಗಿ ಸಹಾಯ ಮಾಡಿದರು. ಮತ್ತು ಕನ್ನಡ ಸಾಹಿತ್ಯವನ್ನು, ಅದರಲ್ಲಿಯೂ ದಾಸಸಾಹಿತ್ಯವನ್ನು, ಬೆಳೆಯಿಸಿ ಅವುಗಳ ಬೆಳಕು ಬೀರಿ, ಎಲ್ಲೆಲ್ಲಿಯೂ ಕನ್ನಡದನಾದವನ್ನು ಎತ್ತಿ ತೋರಿದರು! ಶ್ರೀ ಪುರಂದರದಾಸರ ಸಾಹಿತ್ಯವನ್ನು ಶ್ರೀ ವ್ಯಾಸಯೋಗೀಂದ್ರರು "ಶ್ರೀ ಪುರಂದರೋಪನಿಷತ್ತು"ಗಳೆಂದು ಗೌರವಾತಿಶಯದಿಂದ ಹಾಡಿ, ಹರಸು ವವರಾದರು. ಇದಲ್ಲದೇ, ಗುರ್ಜರ ದೇಶದ ಶ್ರೀ ವಲ್ಲಭಾಚಾರ್ಯರೂ, ಬಂಗಾಲದ ಶ್ರೀ ಚೈತನ್ಯರೂ ಇವರ ಪಾರಂಪರ್ಯವನ್ನೆ ಅನುಸರಿಸಿ,

ಶ್ರೀ ವೈಷ್ಣವ ಸಿದ್ಧಾಂತಗಳನ್ನು ಪ್ರಚಾರಗೊಳಿಸುತ್ತ, ಶ್ರೀ ಹರಿಭಕ್ತಿಯ ಬೆಳಕಿತ್ತು, ಲೋಕಕಲ್ಯಾಣ ಕಲ್ಪಿಸಿಕೊಂಡಿರುವರು ಶ್ರೀ ವ್ಯಾಸರಾಯರನ್ನು ಒಳ್ಳೇ ಅಗಾಧವು, ತುಂಬಾ ಅನುಕರಣೀಯವಾದದ್ದು!

ಶ್ರೀ ಹಂಪೆಯೊಳಗೆ ಶ್ರೀ ವಿಠ್ಠಲ ದೇವಾಲಯದ ಸಭಾಂಗಣದಲ್ಲಿ, ಶ್ರೀ ಯೋಗನೃಸಿಂಹ ವಿಗ್ರಹವನ್ನು, ಇತರ ಅನೇಕ ಸ್ಥಳಗಳಲ್ಲಿ ಶ್ರೀ ಆಂಜನೇಯ ಮೂರ್ತಿಯನ್ನು, ಪ್ರತಿಷ್ಠೆ ಮಾಡಿ, ಶ್ರೀ ಭಗವಲ್ಲೀಲಾ ಸಾಧನೆಯಲ್ಲಿ ತುಂಬಾ ಸಮಯ ಮಾಡಿರುವರು, ಈ ಮಹಾನುಭಾವರು! ಹಂಪೆಯ ಚಕ್ರತೀರ್ಥದ ಬಳಿಯಲ್ಲಿ ಶ್ರೀ ಯಂತ್ರೋದ್ಧಾರಕ ಪ್ರಾಣ ದೇವರನ್ನು ಪ್ರತಿಷ್ಠ ಮಾಡಿದ ಮಹಾತ್ಮರು ಇವರೇ! ಇವರು ಒಟ್ಟಾರೆ ೭೩೨ ಶ್ರೀ ಮಾರುತಿ ಮೂರ್ತಿಗಳನ್ನು ಅಲ್ಲಲ್ಲಿ ಸ್ಥಾಪಿಸಿರುವರೆಂದು ಹೇಳುತ್ತಾರೆ.

ಇವರು ಮಾಡಿರುವ ಗ್ರಂಥರಚನೆಯೂ ಸಣ್ಣದಲ್ಲ ಮುಖ್ಯವಾಗಿ, ಶ್ರೀ ವ್ಯಾಸತ್ರಯ, ಶ್ರೀ ಪಂಚಮಹಾಮಂಜರೀ, ಶ್ರೀ ಮಾಧ್ವ ಗ್ರಂಥ ಮಾಲಿಕಾಸ್ತೋತ್ರ, ಶ್ರೀಕೃಷ್ಣಮಂಗಲಾಷ್ಟಕ, ಶ್ರೀ ಭೇದೋಜ್ಜೀವನ, ಶ್ರೀಪಾದರಾಜ ಪಂಚರತ್ನಮಾಲಾ, ಮುಂತಾದ ಗೀರ್ವಾಣ ಗ್ರಂಥಗಳನ್ನು ರಚಿಸಿ, ಶ್ರೀ ಮಾಧ್ವ ತತ್ತ್ವಗಳ ಬೆಳಕನ್ನು ಬೀರಿದ್ದಾರೆ ಇವರ ಮಾತೃ ಭಾಷಾ–ಕನ್ನಡ–ದ ಮೇಲೂ ಇವರಿಗೆ ತುಂಬಾ ಮಮತೆ ಇತ್ತೆಂಬುದನ್ನು ಇವರು ಮಾಡಿ, ಹಾಡಿರುವ, ಕೀರ್ತನೆ ಉಗಾಭೋಗಾದಿಗಳೇ ಹೇಳುತ್ತವೆ

ಈ ಮಹಾನುಭಾವರ ಸಾಹಿತ್ಯದಲ್ಲೆಲ್ಲ, ಸೂಸಿ ಹರಿಯುವ ಪದ ಮಾಧುರ್ಯ, ಅರ್ಥಗಾಂಭೀರ್ಯ, ಭಕ್ತಿರಸಧಾರೆಗಳು ಎಷ್ಟು ಕಂಡುಬರುತ್ತವೆ, ಓದುಗರ ಹಾಗು ಕೇಳುಗರ ಮನಮುಟ್ಟಿ, ಅವರನ್ನು ಮುಗ್ಧಗೊಳಿಸುತ್ತವೆ ಇವರ ಕನ್ನಡ ಸಾಹಿತ್ಯ ಸೇವೆ ದೊಡ್ಡದು.

ಇವರ ಸಾಹಿತ್ಯದ ಸೊಬಗನ್ನಿಷ್ಟು ನೋಡಬಹುದಾಗಿದೆ

ತಂದೆ ನೀ ತಂದೆ ಜನುಮಜನುಮಕೆ ತಂದೆ
ಕಾಮಕ್ಕೆ ತಂದೆ ಡಾಂಭಿಕಕೆ ತಂದೆ
ಎಂದಿಗೂ ನೀ ತಂದೆ ಎಂದು ನಾ ಬಂದೆನೋ
ಕಂದರ್ಪ ಜನಕ ಸಿರಿಕೃಷ್ಣ ನೀ ಪೊರೆಯೋ ||

ನಿನ್ನ ಎಂಜಲನುಂಡು ನಿನ್ನ ಬೀಳುಡಿಯುಟ್ಟು ।
ಮುನ್ನಮಾಡಿದಕರ್ಮ ಬೆನ್ನಬಿಡದಿರ್ದಡೆ ।
ನಿನ್ನ ಪಾಲ್ಗೈಸ-ವದೇಕೆ ಗೋವಿಂದ ॥
ನಿನ್ನ ಹಾರೈಸುವದೇಕೆ ಗೋಪಾಲ ।
ದಿನಕರನುದಿಸಿ ಕತ್ತಲೆ ಹಿಂಗದಿರ್ದೊಡೆ ।
ಇರುಳೇನು ಹಗಲೇನು ಕುರುಡನಿಗೆ ಸಿರಿಕೃಷ್ಣಾ ॥

(ಬೇ. ಕೇ. —ಹರಿದಾಸಸಾಹಿತ್ಯ.)

ಶ್ರೀ ಕೃಷ್ಣದೇವರಾಯನು ೨೧ ವರ್ಷ ಸುರಾಜ್ಯ ಮಾಡಿ, ಸುಕೀರ್ತಿ ಶೇಷನಾಗಿ ಕ್ರಿ ಶ ೧೫೩೦ ರಲ್ಲಿ ಮಡಿಯುವವನಾದನು ತರುವಾಯ ವಿಜಯ ನಗರದ ಸಿಂಹಾಸನವನ್ನು ಶ್ರೀ ಅಚ್ಯುತರಾಯನು ಏರಿ ರಾಜನಾದನು.

ಶ್ರೀ ವ್ಯಾಸರಾಯರು, ಸಂಚಾರಕ್ರಮವಾಗಿ ಶ್ರೀ ಉಡುಪಿಗೆ ಬರುವವರಾದರು ಅಲ್ಲಿ ಶ್ರೀಮದಾಚಾರ್ಯರಿಂದ ಸ್ಥಾಪಿಸಲ್ಪಟ್ಟ ಶ್ರೀ ಉಡುಪೀ ಅಷ್ಟಮಠದ ಪೂಜಾವೈಭವ ಕಂಡು ತುಂಬಾ ಸಂತೋಷ ಪಡುವವರಾದರು. ನಮ್ಮ ಶ್ರೀ ವ್ಯಾಸರಾಯರು, ಶ್ರೀ ವಾದಿರಾಜರಿಂದ ಏರ್ಪಡಿಸಿದ ಶ್ರೀ ಕೃಷ್ಣನ "ಅವಸರ ಪೂಜೆ" ಯನ್ನು ಮಾಡಿ ಶ್ರೀ ಹರಿಗೆ ಅರ್ಪಿಸಿ ಕೃತಾರ್ಥರಾದರು.

ಈ ಸುಮಾರದಲ್ಲೇ ಶ್ರೀ ಅಚ್ಯುತರಾಯನೂ ಉಡುಪಿಯನ್ನು ಸಂದರ್ಶಿಸಿ, ಶ್ರೀ ಅನಂತೇಶ್ವರ ದೇವಾಲಯ, ಶ್ರೀ ಮಧ್ವಸರೋವರಾದಿಗಳನ್ನು ಕಟ್ಟಿಸಿಕೊಟ್ಟಿರುವನೆಂದು ಹೇಳುತ್ತಾರೆ.

ಹೀಗೆ ಭಾಗವತಾಗ್ರೇಸರ ಹಾಗು ಸತ್ಯಾಗ್ರಹ ಶಿರೋಮಣಿಯಾದ ಶ್ರೀ ಪ್ರಹ್ಲಾದಾವತಾರ ಸ್ವರೂಪಿಗಳಾದ ಶ್ರೀ ವ್ಯಾಸ ತೀರ್ಥರು ಈ ಭೂಲೋಕದಲ್ಲಿ ೯೨ ವರ್ಷಕಾಲ ಜೀವಿಸಿ, ಬಾಳಿ, ೮೫ ವರ್ಷಕಾಲ ಆಶ್ರಮವಹಿಸಿ, ಶಾ. ಶ. ೧೪೬೦ ನೇ ಫಾಲ್ಗುಣ ವದ್ಯ ೪ ಶನಿವಾರ ಕ್ರಿ. ಶ. ೧೫೩೯ ನೇ ಮಾರ್ಚ ೮ನೇ ದಿನ ಬೆಳಗಿನ ಝಾವದಲ್ಲಿ, ಪದ್ಮಾಸನಸ್ಥರಾಗಿ, ಶ್ರೀ ನಾರಾಯಣಧ್ಯಾನಪರರಾಗಿ, ಪರಂಧಾಮಕ್ಕೆ ಚಿತ್ತೈಸುವವರಾದರು. ಆಗ ದೇವತೆಗಳೆಲ್ಲ ಹೂಮಳೆ

ಕರೆದು ವಿಮಾನವನ್ನು ಕಳಿಸಿದರು, ಇವರಿಗಾಗಿ ಇವರನ್ನು ವೈಕುಂಠದಲ್ಲಿ ಶ್ರೀ ಲಕ್ಷ್ಮೀನಾರಾಯಣನು ಕೈಕೊಟ್ಟು ಸ್ವಾಗತಿಸಿ, ಸ್ವೀಕರಿಸುವವನಾದನು ಇದನ್ನು ಶ್ರೀ ಪುರಂದರಾರ್ಯರು, "ಚಿತ್ತೈಸಿದ ವ್ಯಾಸರಾಯ ಚಿತ್ತಜನೈಯ್ಯನ ಸಭೆಗೆ'' ಹೀಗೆ ಹಾಡಿ ಬಣ್ಣಿಸಿದ್ದಾರೆ, ತಮ್ಮ ಅಮೌಲ್ಯ ಗೀತದಲ್ಲಿ!

ಶ್ರೀಪಾದರಾಯರ ಕಾಲಕ್ಕೆ, ಹರಿದಾಸ ಕನ್ನಡ ಸಾಹಿತ್ಯಕ್ಕೆ ಒಳ್ಳೇ ತುಂಬು ಕಳೆ ಬಂದಿತ್ತೆಂದರೆ ಅತಿಶಯೋಕ್ತಿಯಾಗಲಾರದು. ಇಂಥ ಸಾಹಿತ್ಯ ಸಂಗೀತ ರತ್ನರ ಶಿಷ್ಯರೇ ಶ್ರೀ ವ್ಯಾಸರಾಯರು ಸಳುವ ನರಸಿಂಹರಾಜನ ಕಾಲದಿಂದ, ಅಚ್ಯುತರಾಯನ ಕಾಲದ ವರೆಗೆ ಸುಮಾರು ಅರವತ್ತು ವರ್ಷ ಶ್ರೀ ಕರ್ನಾಟಕ ಸಾಮ್ರಾಜ್ಯ ದೇವತೆ ಎಂದು ಹಾಡಿಸಿ, ಹೊಗಳಿಸಿಕೊಂಡು, ಕೃಷ್ಣದೇವರಾಯನಿಂದ ರತ್ನಾಭಿಷಿಕ್ತರಾಗಿ ಕನ್ನಡಭಾಷೆ-ಸಾಹಿತ್ಯ-ಕಲಾ-ಸಂಗೀತಗಳಿಗೆ, ಗಾಯಕರಿಗೆ, ವಿದ್ವಾಂಸರಿಗೆ, ಈ ಶ್ರೀ ವ್ಯಾಸರಾಯರು ಕೊಟ್ಟ ಆಶ್ರಯವು, ಇತಿಹಾಸದಲ್ಲಿ ಸುವರ್ಣಾಕ್ಷರಗಳಿಂದ ಬರೆಯಲ್ಪಟ್ಟಿದೆ ಇವರಿಗಿದ್ದ ಮತ ಸಹಾನುಭೂತಿ, ರಾಜಕಾರಣ ಪಟುತ್ವಾದಿ ಸದ್ಗುಣಗಳು ಮತ್ತಾರಲ್ಲಾದರೂ ಇದ್ದದ್ದಾದರೆ ಅವು ಶ್ರೀ ವಿದ್ಯಾರಣ್ಯರಲ್ಲೆಂದು ಹೇಳಬಹುದು. ಒಬ್ಬರು ಸಾಮ್ರಾಜ್ಯ ಸ್ಥಾಪಕರಾದರೆ, ಮತ್ತೊಬ್ಬರು ಸಾಮ್ರಾಜ್ಯ ಪಾಲಕರು. ಈ ಇಬ್ಬರನ್ನೂ ಬಿಟ್ಟುಕೊಟ್ಟರೆ, ಕರ್ನಾಟಕದ ಇತಿಹಾಸವೇ ಇಲ್ಲವೆಂದು ಹೇಳಬಹುದು. ಶ್ರೀ ವ್ಯಾಸರಾಯರು ಸ್ವಯಂ ಶ್ರೇಷ್ಠ ಸಾಹಿತ್ಯಕರೂ ಹಾಗು ಗಾಯನ ಪಂಡಿತರೂ ಆಗಿದ್ದರು ಅವರ ಸಾಹಿತ್ಯಕ್ಕೂ ಅವರ ಸಂಗೀತಕ್ಕೂ ಒಂದು ಅಭಿನವ ವೈಶಿಷ್ಟ್ಯವಿದೆ ಎಂಬುದನ್ನು ಹೇಳಬೇಕಾಗಿಲ್ಲ.

ಯಾವದೇ ಪ್ರಪಂಚವಾಗಲೀ, ಯಾವದೇ ರಾಜ್ಯ ಸಾಮ್ರಾಜ್ಯವಾಗಲೀ ಸರಾಗವಾಗಿ ಸೋನ್ನತಿ ಮಾರ್ಗವಾಗಿ ಸಾಗಬೇಕಾದರೆ, ಧರ್ಮಕಾರಣ ಹಾಗು ರಾಜಕಾರಣಗಳೆರಡೂ ಬೇಕು. ಮಾನವನ ಕಲ್ಯಾಣ ರಥಕ್ಕೆ ಇವೆರಡೂ ಗಾಲಿಗಳಿದ್ದಂತೆ.

ಒಂದನ್ನು ಬಿಟ್ಟರೆ ಒಂದು ಗಾಲಿ ಇದ್ದದ್ದೂ ಒಗ್ಗಾಲಿಯೇ! ಈ ಧರ್ಮಕಾರಣ ರಾಜಕಾರಣಗಳನ್ನು ಸಮೀಚೀನವಾಗಿ ಸಮನ್ವಯಗೊಳಿಸಿ, ಸುಸೂತ್ರ

ಸಾಮ್ರಾಜ್ಯವನ್ನು ಸಾಗಿಸಿ ವಿಶ್ವಕ್ಕೇನೇ ಒಂದು ಪಾಠ ಹಾಕಿಕೊಟ್ಟಿದ್ದಾರೆ ಶ್ರೀ ವ್ಯಾಸರಾಜರು ಧರ್ಮ ಸಂರಕ್ಷಣೆ ಇಲ್ಲದೇ, ಸುರಾಜ್ಯ ಸುವ್ಯವಸ್ಥೆಗಳು ಬರೀ ಕಾನೂನಿನಲ್ಲೇ ಸಿಕ್ಕುಬಿದ್ದು ಜೋತಾಡುವವೆಂದು ಕೈ ಎತ್ತಿ ಒತ್ತಿ ಹೇಳಿದ್ದಾರೆ ಈ ನಮ್ಮ ವಿಜಯನಗರದ ಸಾಮ್ರಾಜ್ಯ ಮಾದರಿಯಾಗಿ, ಪ್ರಪಂಚ ಕಲ್ಯಾಣಕ್ಕಾಗಿ, ದುಷ್ಟ ದಂಡನವೂ ಮತ್ತು ಸುಷ್ಟ ಸಂರಕ್ಷಣೆಯೂ ಅಗತ್ಯವಲ್ಲವೇ? ಧರ್ಮ, ನೀತಿ, ರಾಜನೀತಿಗಳಾದರೂ ಮಾಡುವದೂ ಇದೇ ಪ್ರಪಂಚಕ್ಕೆ ಒಳಗೆ ಧರ್ಮ ಜಾಗೃತೆ ಇಲ್ಲದೆ, ಹೊರಗಿನ ರಾಜಕಾರಣ ಕಾನೂನಾದಿಗಳಿಂದ ನಿಜವಾದ ಸುಭದ್ರ ಶ್ರೇಯ ಉಂಟಾಗಲಾರದೆಂದು ಶ್ರೀ ವ್ಯಾಸರಾಯರಿಂದ ನಾವು ಕಲಿಯತಕ್ಕ ಸಾರಾಂಶವಾಗಿದೆ. ಶ್ರೀ ವಿಜಯದಾಸರು ಶ್ರೀ ವ್ಯಾಸರಾಯರ ಬಗೆಗೆ ಒಂದು ಪದವನ್ನು ಸ್ವಾರಸ್ಯವಾಗಿ ಹೇಳಿದ್ದಾರೆ.

|| ಶ್ರೀ ವ್ಯಾಸರಾಯರ ಸ್ಮರಿಸಿರೋ ನೀವು ಶ್ರೀ ವ್ಯಾಸರಾಯರ ಸ್ಮರಿಸಿರೋ ||

ವ್ಯಾಸರಾಯರ ಸ್ಮರಿಸಲೇಸು ಜನ್ಮದ ಪಾಪ |
ನಾಶವಾಗುವದು ನಿಮ್ಮಾಸೆ ಸಿದ್ಧಿಸುವದು |
ಲೇಸಾಗಿ ತುತಿಸಲಾನಂದ ವೈಕುಂಠ ಪರಿವಾಸವಾಗುವದು
ಬಿಡದೆ || ಅ. ಪ. ||

ಯಂತ್ರೋದ್ಧಾರಕನ ಪ್ರತಿಷ್ಠಿಸಿ ವಿಜಯೀಂದ್ರ |
ಸಂತ ವಾದಿರಾಜ ಗೋವಿಂದ ಪುರಂದರ |
ರಿಂತು ಶಿಷ್ಯರ ಪಡೆದು ಉಪದೇಶವನು ಕೊಟ್ಟು ಮಂತ್ರಸಿದ್ಧಿಯನು
ಮಾಡಿ || ೧ ||

ರಾಯಗದ್ದುಗೆಯೇರಿ ಅವನಿಗೆ ಬಂದ ಮಹಾ |
ಕುಯೋಗವನು ನೂಕಿ ರಾಜ್ಯಂಗಳೊಳಗಿರ್ದ |
ಮಾಯಿಗಳ ಮಥಿಸಿ ಬಲು ಮುದದಿಂದ ಸೌವರ್ಣಛಾಯದಂದದ
ಲೊಪ್ಪುತ |

ನ್ಯಾಯಾಮೃತತರ್ಕತಾಂಡವ ಚಂದ್ರಿಕೆಯೆಂಬ ।
ನ್ಯಾಯಗ್ರಂಥವ ರಚಿಸಿ ಮುಕ್ತಿಪಥವನುತೋರಿ ।
ಶ್ರೀಯರಸನೊಲಿಸಿ ನಾನಾವಿಧದಿ ಪೂಜಿಸುತ ಸ್ಥಿರಯರಾದರು
ಹಂಪೆಯಲ್ಲಿ ॥ ೨ ॥

ಮಧ್ವಮತವೆಂಬ ವರದುಗ್ಧಾಬ್ಧಿ ಪೂರ್ಣೇಂದು ।
ಹೃದ್ಯಬ್ಜದೊಳಗೆ ಕೃಷ್ಣನ್ನಪಾದಾಂಬುಜವ ।
ಚಿದ್ವಾಕ್ಯದಲಿನಿಲಿಸಿ ಕಾವ್ಯದಿಂ ಕೊಂಡಾಡಿ ಸದ್ವೀರವೈಷ್ಣವರಿಗೆ ।
ಸದ್ವಾರ್ತೆಯನು ಪೇಳಿ ತವಕದಿಂವಲಿ ತಾವು ।
ಸದ್ವೈಷ್ಣವದ ಲೋಕಸೇರಿಮರಳೈದಿದರು ।
ಮಧ್ವವಲ್ಲಭ ನಮ್ಮ ವಿಜಯವಿಠಲನ ಪಾದದ್ವಯ ಭಕುತಿಯಲಿ ನಿತ್ಯ ।
ಶ್ರೀ ವ್ಯಾಸರಾಯರ ಸ್ಮರಿಸಿರೋ ..... ........

ಪದವಾಕ್ಯಪ್ರಮಾಣಜ್ಞೋದುರ್ಮತಧ್ವಾಂತಭಾಸ್ಕರಃ ।
ವ್ಯಾಸತೀರ್ಥ ಮುನೀಂದ್ರೋಮೇ ಭೂಯಾತ್‌ಜ್ಞಾನಸಮೃದ್ಧಯೇ ॥



# ಶ್ರೀ ಗುರು ರಾಘವೇಂದ್ರರು

ಪ್ರಹ್ಲಾದರಾಜಃ ಪ್ರಥಮಃ ವ್ಯಾಸರಾಜಃ ಸ ಏವ ಚ ।
ಸ ಏವ ರಾಘವೇಂದ್ರಸ್ತು ಭಕ್ತಾಭೀಷ್ಟಪ್ರದಾಯಕಃ ।

ಪೂರ್ವಸಮುದ್ರ ತೀರದಲ್ಲಿ ವಿಜಗಾಪಟ್ಟಣಕ್ಕೆ ಸಮೀಪವಾದ ಒಂದು ಹಳ್ಳಿ ಅದರ ಹೆಸರು **ವಿಜಯನಗರ.** ಅಲ್ಲಿ ೧೬ ನೇ ಶತಮಾನದಲ್ಲಿ ತಿಮ್ಮಣ್ಣಾಚಾರ್ಯರೆಂಬ ಒಬ್ಬ ಸತ್ವನಿಷ್ಠ ವಿದ್ವಾಂಸ ಬ್ರಾಹ್ಮಣನಿದ್ದನು. ವೇದ ಶಾಸ್ತ್ರಪಾರಂಗತನಾದ ಒಳ್ಳೇ ದಶಗ್ರಂಥಿ ಬ್ರಾಹ್ಮಣನು ಅವನು ಮೇಲೆ ವೀಣಾವಾದನದಲ್ಲಿಯೂ ಎತ್ತಿದ ಕೈಯಾಗಿತ್ತು, ತಿಮ್ಮಣ್ಣಾಚಾರ್ಯರದು. ವೀಣೀ ತಿಮ್ಮಣಾಚಾರ್ಯರೆಂದು ಅವರ ಪ್ರಸಿದ್ಧಿ ಇತ್ತು ಅಲ್ಲಿ ಒಳ್ಳೇ ಪತಿ ವ್ರತೆಯೂ, ಹಾಗು ಸದ್ಗುಣಮಣಿಯೂ ಆದ ಗೋಪಮ್ಮಳು ತಿಮ್ಮಣ್ಣಾಚಾರ್ಯ ರಿಗೆ ಸಹಧರ್ಮಚಾರಿಣಿಯಾಗಿದ್ದಳು ಇವಳ ಸುಸ್ವಭಾವದ ಸಹವಾಸದಿಂದ ಆಚಾರ್ಯರಿಗೆ ವಿಷಮಯ ಪ್ರಪಂಚ ಕೂಡ ಅಮೃತಮಯವಾಗುತ್ತಿದ್ದುದರಲ್ಲಿ ಆಶ್ಚರ್ಯವಿಲ್ಲ !

ಸಂತಾನವೇ ಇರಲಿಲ್ಲ ಇವರಿಗೆ. ತಿರುಪತಿಯ ಹತ್ತಿರವಿರುವ ತುಂಡೀರ ಮಂಡಲದಲ್ಲಿರುವ **ಪಟ್ಟಣಿ** ಎಂಬಲ್ಲಿ ಬಂದು ಅಲ್ಲಿಯ ವೆಂಕಟೇಶ್ವರನನ್ನು ಸೇವಿಸಿ ಸಂತತಿಗಾಗಿ ಆರಾಧಿಸಹತ್ತಿದರು. ಇವರಿಗೆ ಒಂದು ಕನ್ಯಾರತ್ನವಾ ಯಿತು ಅವಳಿಗೆ **ವೆಂಕಮ್ಮ**ನೆಂದು ಹೆಸರಿಟ್ಟರು ಆ ಮೇಲೆ **ಗುರುರಾಜ** ನೆಂಬ ಮಗನು ಹುಟ್ಟಿದನು. ಇನ್ನೊಬ್ಬ ಮಗ ಬೇಕೆಂದು ಬಯಸಿ ಆ ದಂಪತಿ ಗಳು ಪುನಃ ಸೇವೆಯನ್ನು ಮುಂದುವರಿಸಿದರು ವೆಂಕಟೇಶ್ವರನಲ್ಲಿ. ಅವರಿಗೆ ಪುತ್ರಜನನವಾಯಿತು **ವೀಣಾವೆಂಕಟ** ನೆಂದು ಹೆಸರಿಟ್ಟರು ಆತನಿಗೆ.

ಮುಂದೆ ಮಧುರಾಪುರವಾಸಿಯಾದ ನರಸಿಂಹಾಚಾರ್ಯರಲ್ಲಿ ಅಂದರೆ ತಮ್ಮ (ಅಕ್ಕ ವೆಂಕಮ್ಮನ ಗಂಡ) ಭಾವನಲ್ಲಿ ವೇದಶಾಸ್ತ್ರಾಭ್ಯಾಸ ಮಾಡಲ

ಪ್ರಾರಂಭಮಾಡಿದರು ಕಲಿಸಿದ್ದನ್ನೆಲ್ಲ ಕಲಿತು ಪಾರಂಗತನಾದನು, ನಮ್ಮ ವೆಂಕಣ್ಣನು

**ಸರಸ್ವತಿ** ಎಂಬ ಒಬ್ಬ ಕನ್ಯಾಮಣಿಯನ್ನು ವೆಂಕಣ್ಣನಿಗೆ ಮದುವೆ ಮಾಡಿದನು ಅವರಣ್ಣ ಗುರುರಾಜನು ಮುಂದಿನ ಪ್ರೌಢ ವಿದ್ಯಾಭ್ಯಾಸಂಗಕ್ಕಾಗಿ ಕುಂಭಕೋಣೆಗೆ ತೆರಳಿದನು ವೆಂಕಣ್ಣನು

ಅಲ್ಲಿ ಆಗ (ಮಂತ್ರಾಲಯಮಠದ) ಶ್ರೀ ಸುಧೀಂದ್ರರು ಇರುತ್ತಿದ್ದರು ಅವರಲ್ಲಿಯೇ ವಿದ್ಯಾಭ್ಯಾಸಕ್ಕಾಗಿ ನಿಂತುಕೊಂಡನು ವೆಂಕಣ್ಣನ ವಿಷಯ ಗ್ರಾಹಕತೆ ಹಾಗು ತೀವ್ರ ಮೇಧಾಶಕ್ತಿಗಳನ್ನು ಕಂಡು, ಅಲ್ಲಿಯ ಹಲಕೆಲವು ಸಹಪಾಠಿಗಳಿಗೆ ಅಸೂಯೆ ಉಂಟಾಗಹತ್ತಿತು ಒಂದಾನೊಂದು ದಿನ, ಗುರುಗಳಿಗೆ, ಈ ಆಗದ ಹುಡುಗರು, "ಗುರುಗಳೇ, ಈ ವೆಂಕಣ್ಣ ಬರೀ ಆಟಾಳಿ; ತುಂಬಾ ವ್ಯೆಗಳ್ಳ; ಅಭ್ಯಾಸದಲ್ಲಿ ಎಳ್ಳಷ್ಟೂ ಆಸಕ್ತಿ ಇಲ್ಲ ನೋಡ್ರಿ ಆತನಿಗೆ, ಹಗಲೂ ಇರುಳೂ ಸೋಮಾರಿಯಂತೆ ಕಾಲಹರಣ ಮಾಡುತ್ತಾನೆ, ಇಂಥ ಉಂಡಾಳಿ ಆಟಗುಳಿಯನ್ನು ಮಠದಿಂದ ತಳ್ಳಿಹಾಕಬೇಕು" ಹೀಗೆ ದೂರು ಮಾಡಿ ಅವರನ್ನುಕೆರಳಿಸಿದರು.

ಒಮ್ಮೆ ಶ್ರೀಗಳು ಶಿಷ್ಯರಿಗೆ ಸುಧಾ ಪಾಠ ಹೇಳಿಕೊಡುತ್ತಿದ್ದರು ಒಂದು ವಾಕ್ಯಾರ್ಥ ಬೇಗ ಹೊಳೆಯದೆ ಹೋಯಿತು, ಗುರುಗಳಿಗೆ. ಮರುದಿನ ಹೇಳುತ್ತೇವೆಂದು ಹೇಳಿದರು ಗುರುಗಳು ಆಗ. ಅದೇ ರಾತ್ರಿ ಶ್ರೀ ಗುರುಗಳು ವೆಂಕಣ್ಣನನ್ನು ಪರೀಕ್ಷಿಸಬೇಕೆಂದು ಅವನ ಬಿಡಾರಕ್ಕೆ ಒಬ್ಬರೇ ಬಂದರು. ಆದರೆ ಬಂದು ನೋಡುತ್ತಾರೆ, ವೆಂಕಣ್ಣನನ್ನು! ಬದಿಯಲ್ಲಿ ಕೆಲವು, ಎದೆಯ ಮೇಲೆ ಕೆಲವು ಹೀಗೆ ಬರೆದ ವಾಲಿಗಳು ಹಾರಾಡುವದನ್ನು ಕಂಡು ಬೆರಗಾದರು. ಆ ಕುಚೋದ್ಯಗಾರ ಹುಡುಗರಿಗೆ ಬಾಯಿ ತುಂಬ ಬೈದುಬಿಟ್ಟರು, ಸುಮ್ಮ ಸುಮ್ಮನೇ ಸುಳ್ಳು ಸುದ್ದೀ ಹಬ್ಬಿಸಿದ್ದಕ್ಕೆ ! ವಾಲಿಯನ್ನು ಓದಿ ನೋಡಿದರು ತಮಗೆ ಬೇಗ್ಗೆ ನಿಂತುಹೋದ ವಾಕ್ಯಾರ್ಥವನ್ನು ವೆಂಕಣ್ಣನು ತೋಳೆತೊಳೆಯಾಗಿ ಬಿಡಿಸಿ ಬರೆದದ್ದನ್ನು ನೋಡಿ ಬಾಯಿಯೊಳಗೆ ಬೆರಳೇ ಹಾಕಿಕೊಂಡರು. ವೆಂಕಣ್ಣನ ವಿಲಕ್ಷಣ ವಿದ್ವತ್ತಿಗೆ ತಲೆತೂಗಿ ಧಾರೆಯಾಗಿ ಆನಂದಾಶ್ರುಗಳನ್ನು ಹರಿಸಿದರು. ಅವನು **"ಸುಧಾ"** ಪಾಠಕ್ಕೆ **"ಪರಿಮಳ"** ವೆಂಬ ಗ್ರಂಥವನ್ನು

ಬರೆಯುತ್ತಿರುವದನ್ನು ನೋಡಿ, ಹರ್ಷಪುಲಕಿತರಾಗಿ ತಮ್ಮ ಮೈಮೇಲಿನ ಶಾಲನ್ನೇ ಆ ವೆಂಕಣ್ಣನ ಮೈತುಂಬ ಹೊಚ್ಚಿ ಮರಳಿಬಿಟ್ಟರು.

ಮುಂದೆ ಗುರುಗಳ ಆಶೀರ್ವಾದದಿಂದ ನಮ್ಮ ವೆಂಕಣ್ಣನು "**ಪರಿಮಳಾಚಾರ್ಯ**"ರಾದರು. ವೆಂಕಣ್ಣಾಚಾರ್ಯರ ಭಾಷಾನುವಾದ ಚಾತುರ್ಯಕ್ಕೆ "**ಮಹಾಭಾಷ್ಯ**"ರೆಂಬ ಪದವಿಯನ್ನೂ ಕೊಟ್ಟರು ಅವರಿಗೆ.

ತಂಜಾವೂರಲ್ಲಿ "ಯಜ್ಞನಾರಾಯಣಭಟ್ಟ"ನೆಂಬ ಒಬ್ಬ ಉದ್ದಾಮ ಪಂಡಿತನನ್ನು ವಾದದಲ್ಲಿ ಜಯಿಸಿ "**ಭಟ್ಟ**"ನೆಂಬ ಬಿರುದನ್ನೂ ಗಳಿಸಿಕೊಂಡರು ವೆಂಕಣ್ಣಾಚಾರ್ಯರು

"ಭಟ್ಟ"ರಿಗೆ ಸರಸ್ವತಿಯು ಒಲಿದಂತೆ ಲಕ್ಷ್ಮಿಯು ಒಲಿಯುತ್ತಿರಲಿಲ್ಲ ಯಾಕೋ ಯಾರು ಬಲ್ಲರು? ಇವರಿಗೆ ದಿನಾಲು ತಾಪತ್ರಯದ ತೆರೆಗಳು ಒಂದೊಂದು ತೆರವಾಗಿ ತೊಂದರೆ ಕೊಡುತ್ತಿದ್ದವು ಪ್ರಪಂಚದಲ್ಲಿ. ಇವರ ಮಗನಾದ ಲಕ್ಷ್ಮೀನಾರಾಯಣಾಚಾರ್ಯರು, ಇವರ ಬಡತನದ ಚಿತ್ರವನ್ನು ಹೀಗೆ ಚಿತ್ರಿಸಿದ್ದಾರೆ.

ಸ್ಥೂಲಂ ವಸ್ತ್ರಂ ಸಂತತಂ ಚಾಲ್ಪಮೌಲ್ಯಂ ।
ನವ್ಯಂ ವಸ್ತ್ರಂ ನೈವ ಸೂಕ್ಷ್ಮಂ ಕದಾಪಿ ।
ಕ್ಷೌಮೇ ತಸ್ಮಿನ್ ಕಾ ಕಥಾಽಕಿಂಚನಸ್ಯ ॥
ತೈಲಾಭ್ಯಂಗಂ ವತ್ಸರಸ್ಯೈಕವಾರಂ ।
ನೈತಸ್ಯಾಸ್ತಿ ಪ್ರಾಜ್ಯಮಾಜ್ಯಂ ಕಥಂ ಸ್ಯಾತ್ ॥

ಅಲ್ಪ ಬೆಲೆಯ ಉರುಟು ವಸ್ತ್ರ ಒಂದು ಇಡೀ ವರ್ಷದಲ್ಲಿ ಸಿಗುವದೂ ಕಷ್ಟವಾಗಿ ಹೋಗಿತ್ತು; ಅಂದಮೇಲೆ, ಸೂಕ್ಷ್ಮ ರೇಶ್ಮೆ ಮುಂತಾದ ಉಡುಪುಗಳ ಮಾತೇಕೆ ಅವರಿಗೆ ಪಾಪ! ಮೈ, ತಲೆಗೆ ಒಂದಿಷ್ಟು ಎಂಣೆಯೂ ಇಡೀ ವರ್ಷದಲ್ಲಿ ಒಮ್ಮೆ ಕೂಡ ಲಭಿಸುತ್ತಿರಲಿಲ್ಲ ಮನೆಯಲ್ಲಿ; ದಿನಾಲು ಭೋಜನದಲ್ಲಿ ತುಪ್ಪವೇ ಇರುತ್ತಿರಲಿಲ್ಲ ಅವರಿಗೆ!

ಒಮ್ಮೆ ಶ್ರೀ ಸುಧೀಂದ್ರರಿಗೆ ಒಂದು ನಗರದಲ್ಲಿ ಒಬ್ಬ ನ್ಯಾಯಾಧೀಶನು "ಭಿಕ್ಷೆ" ಮಾಡಿಸಿದ್ದನು. ಆತನು "ಭಟ್ಟ"ರ ಯೋಗ್ಯತೆಯನ್ನರಿಯದೆ ಆತನಿಗೆ ಗಂಧವನ್ನು ತೇಯಲಿಕ್ಕೆ ಅಜ್ಞಾಪಿಸಿದನು. "ಭಟ್ಟ"ರು "ಅಗ್ನಿಸೂಕ್ತ" ದಿಂದ ಗಂಧವನ್ನು ತೇಯ್ದು ಸಿದ್ಧಗೊಳಿಸಿದರು. ಆದರೆ ಅದನ್ನು ಮೈಗೆ ಪೂಸಿ ಕೊಂಡಾಕ್ಷಣವೇ ಮೈಯೆಲ್ಲಾ ಉರಿಯಹತ್ತಿ ಒಳದಾಹ ಹೊರದಾಹಗಳಿಂದ ಹುರಪಳಿಸಿ ಎಲ್ಲರೂ ಒದ್ದಾಡತೊಡಗಿದರು. "ಪ್ರಮಾದ"ವಾದದ್ದನ್ನು ಕಂಡು ಆ ನ್ಯಾಯಾಧೀಶನು ಬ್ರಾಹ್ಮಣವೃಂದಸಮೇತನಾಗಿ "ಭಟ್ಟ" ರಿದ್ದಲ್ಲಿಗೆ ಬಂದು ಅವರ ಕಾಲುಹಿಡಿದುಕೊಂಡು ಕ್ಷಮೆಯನ್ನು ಬೇಡಿಕೊಂಡನು. "ಭಟ್ಟ"ರು ಆ ಮೇಲೆ "ವರುಣಸೂಕ್ತ"ದಿಂದ ಪುನಶ್ಚ ಗಂಧವನ್ನು ತೇಯ್ದು ಅದನ್ನು ಪೂಸಿ ಕೊಳ್ಳಲು ಎಲ್ಲರಿಗೂ ಹೇಳಿದರು. ಆ ಮೇಲೆ ಎಲ್ಲರೂ ಸಮಾಧಾನ ಹೊಂದಿ ಸುಖವಾಗಿ ಭೋಜನಮಾಡಿದರು "ಭಟ್ಟ"ರ ಬೆಲೆಯನ್ನು ಬಲ್ಲವರೇ ಬಲ್ಲರು!

ಕೆಲವು ದಿನಗಳ ನಂತರ "ಸರಸ್ವತಿಮ್ಮನಿಗೆ" ಲಕ್ಷ್ಮೀನಾರಾಯಣನೆಂಬ ಪುತ್ರ ಜನಿಸಿದನು. "ರಾಘವೇಂದ್ರವಿಜಯ" ವೆಂಬ ದಿವ್ಯ ಗ್ರಂಥವನ್ನು ಇವರೇ ಬರೆದವರು.

ದಿನ ಹೋದಂತೆ ಶ್ರೀ ಸುಧೀಂದ್ರರಿಗೆ ಮೈಯಲ್ಲಿ ಆಲಸ್ಯ ಉಂಟಾಯಿತು ವೆಂಕಣ್ಣಾಚಾರ್ಯರಿಗೇನೇ ಕಾಯಿ ಕೊಟ್ಟು ಸಂಸ್ಥಾನ ಬಿಟ್ಟುಕೊಡಬೇಕೆಂದು ವಿಚಾರ ಮಾಡಿಕೊಂಡರು. ಆದರೆ ವೆಂಕಣ್ಣಾಚಾರ್ಯರು ಇದನ್ನು ಕೇಳಿ ತೊಡಕಿಗೀಡಾಗಿ—

ಬಾಲಾಭಾರ್ಯಾ ಬಾಲಕೋನೋಪನೀತಃ ।
ತಸ್ಮಾನ್ನಾಸ್ತಿ ಸ್ವಾಶ್ರಮೇಽಸ್ಮಿನ್ಮನೀಷಾ ॥
ಪಾಂಡಿತ್ಯಂ ಮೇ ಜ್ಞಾನಮಸ್ತಿ ಪ್ರಭೋ ತೇ ।
ಕಾರ್ಯಾದಸ್ಮಾನ್ಮುಚ್ಯತಾಂ ಶ್ರೀ ಸುಧೀಂದ್ರಃ ॥

"ಹೆಂಡತಿಯು ಇನ್ನೂ ಚಿಕ್ಕವಳು; ಮಗು ಕೂಡಾ ಒಂದೇ ಒಂದು ಆಗಿದೆ; ಇಂಥ ಈ ನನ್ನ ಎಳೆ ವಯಸ್ಸಿನಲ್ಲಿ ಆಶ್ರಮವನ್ನು ನನಗೆ ಕೊಡುವ ದನ್ನು ನಿಲ್ಲಿಸಬೇಕು ಸ್ವಾಮೀ"

ಆ ಮೇಲೆ ನಿರುಪಾಯತೆಯಿಂದ ತಮ್ಮ ಅಳಿಯನಿಗೆ ಕಾಯಿ ಕೊಟ್ಟು "ಶ್ರೀಯಾದವೇಂದ್ರರೆಂ"ದು ಅವರಿಗೆ ಶ್ರೀಗಳು ಹೆಸರಿಟ್ಟರು.

ಸುದೈವದಿಂದ ಶ್ರೀ ಸುಧೀಂದ್ರರು ಗುಣಮುಖರಾದರು. ಒಂದು ರಾತ್ರಿ ಶ್ರೀ ಮೂಲರಾಮನು, ಕನಸಿನಲ್ಲಿ ಬಂದು ಶ್ರೀಗಳವರಿಗೆ, "ವೆಂಕಣ್ಣನೇ ಯೋಗ್ಯನಿರುವನು, ಅವನಿಗೇನೇ ಕಾಯಿ ಇತ್ತು ಸಂಸ್ಥಾನವನ್ನು ಒಪ್ಪಿಸ ಬೇಕೆಂ"ದು ಹೇಳಿದನು ಗುರುಗಳು ಹರ್ಷದಿಂದ ಹಿಗ್ಗಿ, ತಮ್ಮ ಪ್ರೀತಿಪಾತ್ರ ನಾದ ವೆಂಕಣ್ಣಾಚಾರ್ಯರಿಗೇನೇ ಆಶ್ರಮವನ್ನಿತ್ತರು. ಈ ಸಂನ್ಯಾಸಾಶ್ರ ಮವು ಕ್ರಿ ಶ ೧೬೨೩ ರಲ್ಲಿ ಆಗ **ತಂಜಾವೂರಿನ** ಅರಸನ ಸಮಕ್ಷಮ ಶಕೆ ೧೫೪೫ ನೇ ರುಧಿರೋದ್ಗಾರಿ ಸಂವತ್ಸರದ ಫಾಲ್ಗುಣ ಶುದ್ಧ ೨ ದಿನ ನಡೆ ಯಿತು. ವೆಂಕಣ್ಣಾಚಾರ್ಯರು "ಶ್ರೀ ರಾಘವೇಂದ್ರ"ರಾದರು. (ಕ್ರಿ. ಶ. ೧೬೨೩-೧೬೭೧ ವ ೪೭-೪-೨೯) ಆಗ ತಂಜಾವೂರಿನಲ್ಲಿ ರಘುನಾಥ ಭೂಪಾಲ ನೆಂಬ ಅರಸನು ಆಳುತ್ತಿದ್ದನು. ಅವನು ಸ್ವಯಂ ವಿದ್ವಾಂಸನಾಗಿದ್ದು, ಎಲ್ಲ ಪಂಡಿತರಿಗೂ ಒಳ್ಳೇ ಆಶ್ರಯದಾತನಾಗಿದ್ದನು.

ಶ್ರೀ ಸುಧೀಂದ್ರರ ವೃಂದಾವನವು ತುಂಗಭದ್ರಾ ತೀರದಲ್ಲಿ ಆನೇಗುಂದಿ ಯಲ್ಲಿ ಆಯಿತು.

ಎಳೆವಯಸ್ಸಿನಲ್ಲಿ ಯಜಮಾನರು ಆಶ್ರಮ ಸ್ವೀಕರಿಸಿದ್ದನ್ನು ಕೇಳಿ ನೋಡಿ. ಸರಸ್ವತಿಮ್ಮನು ಮನಸ್ಸಿಗೆ ತುಂಬಾ ಬೇಜಾರಪಟ್ಟುಕೊಂಡು ಭಾವಿ ಯೊಳಗೆ ಹಾರಿಕೊಂಡು ಪ್ರಾಣವನ್ನೇ ಕೊಟ್ಟುಬಿಡುವವಳಾದಳು. ಜ್ಞಾನ ದೃಷ್ಟಿಯಿಂದ ಎಲ್ಲವನ್ನೂ ತಿಳಿದವರಾಗಿ, ಸರಸ್ವತಿಮ್ಮನಿಗುಂಟಾದ ಪಿಶಾಚ ಬಾಧೆಯನ್ನು ತಮ್ಮ ತಪೋಸಾಮರ್ಥ್ಯದಿಂದ ಕಳೆದು, ಉದ್ಧಾರ ಮಾಡಿ, ವೈಕುಂಠಪ್ರಾಪ್ತಿಯನ್ನೊದಗಿಸಿಕೊಟ್ಟರು ಆ ಮಹಾನುಭಾವರು.

"ಭೂತಳಸಾಧನ ಭೀತಿಯ ಬಿಡಿಸಿದಿ, ಪ್ರೇತತ್ವವ ಕಳೆದಿ, ಮಹಿಮೆಯು, ಮಹಾಮಹಿಮಾ, ಶ್ರೀ ಜಗನ್ನಾಥನ ಪ್ರೀತಿಪಾತ್ರಾ, ರಾಯ್‌ಬಾರೋ"

—ಜ. ದಾಸರು.

ಶ್ರೀ ರಾಘವೇಂದ್ರರಿಗೆ ಸಂಸ್ಥಾನವಾದದ್ದನ್ನು ಕೇಳಿ ಶ್ರೀ ಯಾದವೇಂದ್ರರಿಗೆ ತುಂಬಾ ಜುಗುಪ್ಸೆಯುಂಟಾಯಿತು ಕುಂಭಕೋಣೆಗೆ ಹೋಗಿ ರಾಘವೇಂದ್ರರನ್ನು ಉಸುಕಿನೊಳಗೆ ಹುಗಿದುಬರ್ರೆಂದು ತಮ್ಮ ಶಿಷ್ಯರಿಗೆ ಆಜ್ಞೆ ಮಾಡುವವರಾದರು ಗುರ್ವಾಜ್ಞಾನುಸಾರವಾಗಿ, ಶಿಷ್ಯಶಿಷ್ಯರು ಶ್ರೀ ರಾಘವೇಂದ್ರರನ್ನು ನಿಷ್ಕಾರಣವಾಗಿ, ಆಕಂಠಪರ್ಯಂತ ಹೂಳಿಬಿಟ್ಟರು ಬಿಸಿಲಲ್ಲಿ. ಆ ಸಾಧುಸ್ವಭಾವಶೀಲರಾದ ಗುರುಗಳು ಯಾರನ್ನೂ ದೂಷಿಸದೆ, ಆ ದಯಾಮಯ ದೀನ ಬಂಧುವನ್ನೇ ನಂಬಿ ಸ್ತುತಿಸಿ ಹಾಡತೊಡಗಿದರು

ರಾಗ–ಭೈರವಿ. ತಾಳ–ತ್ರಿಪುಟೆ

ಇಂದು ಎನಗೆ ಗೋವಿಂದಾ ನಿನ್ನ ಪಾದಾರ|
ವಿಂದವ ತೋರೋ ಮುಕ್ಕುಂದಾ ||ಪ||
ಸುಂದರ ವದನನೆ ನಂದಗೋಪನ ಕಂದಾ |
ಮಂದರೋದ್ಧಾರಾ ಆನಂದಾ ಇಂದಿರೆ ರಮಣಾ ||ಅ. ಪ.||

ನೊಂದೆನಯ್ಯಾಭವ | ಬಂಧನದೊಳು ಸಿಲುಕೀ |
ಮುಂದೆ ದಾರಿಗಾಣದೆ | ಕುಂದಿದೆ ಜಗದೊಳು ||
ಕಂದನೆಂದು ಎನ್ನ | ಕುಂದುಗಳೆಣಿಸದೆ |
ತಂದೆ ಕಾಯೋ ಕೃಷ್ಣಾ | ಕಂದರ್ಪಜನಕನೆ ||೧||

ಮೂಢತನದಲಿ ಬಲು | ಹೇಡಿಜೀವನನಾಗಿ |
ಧೃಢ ಭಕುತಿಯನು ಮಾಡಲಿಲ್ಲವೋ ಹರಿಯೇ ||
ನೋಡಲಿಲ್ಲವೋ ನಿನ್ನ | ಪಾಡಲಿಲ್ಲವೋ ಮಹಿಮೆ |
ಗಾಡಿಕಾರ ಕೃಷ್ಣ | ಬೇಡಿಕೊಂಬೆನು ನಿನ್ನ ||೨||

ಧಾರುಣಿಯೊಳು ಭಾರಜೀವನನಾಗಿ |
ದಾರಿತಪ್ಪಿನಡೆವೆ ಸೇರಿದೆ ಕುಜನರ | ಆರೂ ಕಾಯುವರಿ
ಸೇರಿದೆ ನಿನಗಯ್ಯಾ | ಧೀರ ವೇಣುಗೋಪಾಲ |
ಪಾರುಗಾಣಿಸೋ ಹರಿಯೇ ||೩||

ಸಂಸ್ಕೃತದಲ್ಲಿ ಘನಪಂಡಿತರಾದ ಶ್ರೀ ಗುರುಗಳಿಗೆ ತಮ್ಮ ತಾಯ್ನುಡಿಯ ಮೇಲೆ ಅದೆಷ್ಟು ವಾತ್ಸಲ್ಯ ಮಮತೆಗಳಿದ್ದವೆಂಬುದನ್ನು ಈ ಸರಸ ಹಾಗು ಸುಲಲಿತ ಪದ್ಯದಿಂದ ಕಂಡುಕೊಳ್ಳಬಹುದಾಗಿದೆ ಸಾಹಿತ್ಯ ಸಂಗೀತ ರಸಿಕರಿಲ್ಲಿ.

ಈ ಪದವನ್ನು ಕೇಳಿ, ಕರುಣೆಯಿಂದ ಕಲ್ಲುಕೂಡ ಕರಗಿ ನೀರಾಗಿದ್ದರೆ ಆಶ್ಚರ್ಯವಲ್ಲ !

ಅವರ ಸದ್ಭಕ್ತಿ ಸಂಗೀತಗಳಿಗೆ, ಶ್ರೀಕೃಷ್ಣನು ಮೆಚ್ಚಿ ಒಲಿದುಬಂದು, ಅವರನ್ನು ಆ ಸುಡುಸುಡು ಉಸುಕಿನೊಳಗಿಂದ, ಕೈಕೊಟ್ಟು ಎತ್ತಿಕೊಂಡು ಉದ್ಧರಿಸುವವನಾದನು ಭಗವಂತನು ಭಾವಕ್ಕೆ ಒಲಿಯುವಂತೆ ಬೇರಾವು ದಕ್ಕೂ ಒಲಿಯನು !

ರಾಘವೇಂದ್ರರು ಪಾರಾಗಿ ಬದುಕಿಕೊಂಡ ಸುದ್ದಿಯು ಎಲ್ಲೆಲ್ಲಿಯೂ ಹರಡಿತು. ಮತ್ತೆ ಸಂಸ್ಥಾನಾಧಿಪತ್ಯಕ್ಕಾಗಿ ಜಗಳಸುರುವಾಯಿತು. ಕೊನೆಗೆ ಈ ಇಬ್ಬರೂ ಯತಿಗಳು ತಮ್ಮತಮ್ಮ ಆಶ್ರಮ ನಿರ್ಣಯಕ್ಕಾಗಿ, ತಂಜಾವೂರ ಅರಸನಲ್ಲಿಗೆ ಹೋಗುವವರಾದರು. ಇಬ್ಬರ ಅಭಿಪ್ರಾಯಗಳನ್ನು ಕೇಳಿಕೊಂಡು ಆ ಚತುರ ರಾಜನು, ಹೀಗೆ ನಿರ್ಣಯ ವಿಧಿಸಿದನು.

ಯಾದವೇಂದ್ರೋ ದ್ವಾಪರೇ ತು ಧೇನೂನಾಂ ಪಾಲಕೋಽಭವತ್ ।
ತ್ರೇತಾಯಾಂ ರಾಘವೇಂದ್ರಸ್ತು ಸಾಮ್ರಾಜ್ಯಂ ಪಾಲಯನ್ ಬಭೌ ॥

ಸಾಮ್ರಾಜ್ಯಾಧಿಕಾರವು ಶ್ರೀ ರಾಘವೇಂದ್ರರಿಗೆ ಇರುವಂತೆ, ಶ್ರೀ ಯಾದವೇಂದ್ರರಿಗೆ ಇದ್ದದ್ದು ಕಂಡುಬರುವದಿಲ್ಲ!

ನಮ್ಮ ಶ್ರೀ ರಾಘವೇಂದ್ರರೇ ಸಂಸ್ಥಾನಾಧಿಪತಿಗಳಾದರು. ಶ್ರೀ ಯಾದವೇಂದ್ರರು ಕೃಷ್ಣಾ ಸ್ಟೇಶನ್ನ ಹತ್ತಿರಿರುವ "ಮುಡುಮಾರಿ" ಎಂಬಲ್ಲಿ ಮುಂದೆ ವೃಂದಾವನಸ್ಥರಾದರು.

ನಂತರ ಶ್ರೀಗಳು ಯಾತ್ರಾತೀರ್ಥಸ್ಥಳಗಳನ್ನು ಸಂದರ್ಶಿಸುತ್ತ ಸಂಚಾರ ಮಾಡುತ್ತ ಮಾಡುತ್ತ ಶ್ರೀ ಉಡುಪಿಗೆ ಬರುವವರಾದರು. ಅಲ್ಲಿ ಚಂದ್ರಿಕಾ ವಿವರಣ, ತಂತ್ರದೀಪಿಕೆ, ನ್ಯಾಯಮುಕ್ತಾವಳಿ ಈ ಗ್ರಂಥಗಳನ್ನು

ಶ್ರೀಕೃಷ್ಣನಿಗೆ ಸಮರ್ಪಿಸಿದರು ಮುಂದೆ ಪಂಢರಪುರ, ಕೊಲ್ಹಾಪುರ ಶ್ರೀ-ಮುಷ್ಣ ಮುಂತಾದ ಕ್ಷೇತ್ರಗಳನ್ನು ಕಂಡುಕೊಂಡು ಪುನಃ ಕುಂಭಕೋಣೆಗೆ ಬರುವವರಾದರು

---

## ಮಂತ್ರಾಲಯ

★

ಆದವಾನಿಯ ಬಳಿಯಲ್ಲಿ "ಕಂದನಾತಿ" ಎಂಬ ಒಂದು ಗ್ರಾಮವಿತ್ತು. ಅಲ್ಲಿಗೆ ಶ್ರೀಗಳು ದಯಮಾಡಿಸುವವರಾದರು. ಊರ ಶೆಟ್ಟಿಶ್ರೀಮಂತರನ್ನೆಲ್ಲ ಬಿಟ್ಟು, ಅಲ್ಲಿಯ "ವೆಂಕಣ್ಣ" ನೆಂಬ ಒಬ್ಬ ಬಡಬ್ರಾಹ್ಮಣನ ಮನೆಗೆ ನೇರವಾಗಿ ಬಂದುಬಿಟ್ಟರು ಒಂದುದಿನ ಬಡವರಮನೆಗೆ ಭಾಗೀರಥಿ ಬಂದಂತಾಯಿತು! ಆದರೆ ವೆಂಕಣ್ಣ ಹಾಗು ಅವನ ತಾಯಿಗೆ ತುಂಬಾ ಆಶ್ಚರ್ಯವಾಗಿ ಅವರು ಭಯಭಕ್ತಿಗಳಿಂದ ಗದಗದ ನಡುಗಿಹೋದರು, ಶ್ರೀಗಳವರು ತಮ್ಮಲ್ಲಿಯೇ ಬಂದುದನ್ನು ನೋಡಿ! ತಮ್ಮಂಥ ಬಡವರಲ್ಲಿ ಶ್ರೀಗಳವರ ಯೋಗಕ್ಷೇಮವು ಹೇಗಾಗಬೇಕೆಂದು ಘೋರಾಲೋಚನೆಯೊಳಗೆ ಸಿಕ್ಕು ಪೇಚಾಡತೊಡಗಿದರು ಪಾಪ ! ಆದರೆ ಶ್ರೀ ಮೂಲರಾಮದೇವರ ಪೂಜೆ ನೈವೇದ್ಯ ಭೋಜನಾದಿಗಳೆಲ್ಲ ಆ ವೆಂಕಣ್ಣನಲ್ಲಿಯೇ ಯಥಾಸಾಂಗವಾಗಿ ನೆರವೇರಿದವು. ದವಸ ಧಾನ್ಯ ಸೀದಾ ಸಾಮುಗ್ರಿಗಳು ಎಲ್ಲಿಂದಲೋ ಬಂದು ರಾಶಿಯಾಗಿ ಬಿದ್ದು, ಏತಕ್ಕೂ ಕೊರತೆ ಬೀಳದಂತೆ ಸಮಾರಾಧನೆ ಸಾಗಿತು!

ಶ್ರೀಗಳು.— ನಿಮ್ಮ ವೆಂಕಣ್ಣನಿಂದ ನಮಗೊಂದು ಕೆಲಸವಾಗಬೇಕಾಗಿದೆ. ನೀವು "ಹೂಂ" ಎಂದರೆ ನಮಗೆ ಸಂತೋಷವಾಗುತ್ತದೆ

ತಾಯಿ:— (ನಕ್ಕು) ಏನು ಸ್ವಾಮೀ ಈ ಹುಡುಗಾಟ! ನಮ್ಮಂಥ ಕ್ಷುದ್ರಾಪಿ ಕ್ಷುದ್ರರಾದವರಲ್ಲಿ ನಿಮ್ಮಂಥವರ ಕೆಲಸವೆಂದರೇನು? ಅದು ಆಗುವದೆಂದರೇನು, ನೀವೇ ನೋಡಿರಿ!

ಶ್ರೀಗಳು-- ಇಂದಿಲ್ಲ ನಾಳೆ ನಿಮ್ಮ ಈ ವೆಂಕಣ್ಣನು ಒಬ್ಬ ದೊಡ್ಡ ಅಧಿಕಾರಸ್ಥನಾಗುವನು ಈಗ ನೀವು ವಚನ ಕೊಡಿರಿ. ಅವನು ಒಳ್ಳೇ ಭಾಗ್ಯವಂತನಾಗುವನು ಇದು ನಮ್ಮ ಆಶೀರ್ವಾದ

ವೆಂಕಣ್ಣನು ಶ್ರೀಗಳಿಗೆ ಅವರ ಕೆಲಸ ಮಾಡಿ ಕೊಡುವೆನೆಂದು ವಚನವಿತ್ತನು

ಕೆಲವು ವರ್ಷಗಳು ಉರುಳಿದವು. ಆದವಾನಿಯಲ್ಲಿ ಅಬ್ದುಲ್‌ಖಾನನೆಂಬೊಬ್ಬ ಸರದಾರನಿದ್ದನು. ಅವನೊಮ್ಮೆ ಅಶ್ವಾರೂಢನಾಗಿ, ಊರ ಹೊರಗೆ ವಾಯು ಸೇವನೆಗೋ ಬೇಟೆಗೋ ಹೋಗುತ್ತಿದ್ದನು ಆಗ ಅವನಿಗೆ ಒಬ್ಬ ಒಂಟೆಸವಾರನು, ಒಂದು ಕಾಗದದ ಲಕೋಟೆ ಕೊಟ್ಟು 'ಮಹತ್ವವಾದ ಸುದ್ದಿ ಇದೆ' ಎಂದು ಹೇಳಿ ಹೊರಟುಹೋದನು. ಆದರೆ ಖಾನನಿಗೆ ಓದು ಬರಹ ಅಷ್ಟಕ್ಕಷ್ಟೇ ! ಅಲ್ಲಲ್ಲಿ ಓದುವವರಿಗಾಗಿ ಶೋಧಿಸಿದನು ನಮ್ಮ ವೆಂಕಣ್ಣನು ಅಲ್ಲಿಯೇ ಹೋಗುತ್ತಿರಲು ಅವನನ್ನೇ ಕರೆದು ತಂದನು.

ಖಾನನು.— ನಿನಗೆ ಈ ಕಾಗದ ಓದಲು ಬರುತ್ತಿದ್ದರೆ ಒಂದಿಷ್ಟು ಓದಿ ಹೇಳು ನೋಡೋಣ

ವೆಂಕಣ್ಣನು ಕೂಡಲೆ ಆ ಕಾಗದ ಬಿಚ್ಚಿ ಒಳ ಸುದ್ದಿಯನ್ನೆಲ್ಲ ವಿವರವಾಗಿ ಹೇಳಿದನು. ಖಾನನು ತುಂಬಾ ಸಂತುಷ್ಟನಾಗಿ,

ಖಾ— (ವೆಂಕಣ್ಣನ ಬುದ್ಧಿಚಾತುರ್ಯಕ್ಕೆ ಮೆಚ್ಚಿ, ಅವನನ್ನೇ ನೋಡುತ್ತ) ಏನೋ ನಮ್ಮ ಜೊತೆಗೆ ಬರುವೆಯೇನೋ? ನಿನಗೆ ನಾವು ಒಳ್ಳೇ ವಿದ್ಯೆ ಬುದ್ಧಿ ಕಲಿಸಿ ಒಳ್ಳೇ ಅಧಿಕಾರದಲ್ಲಿ ಇರಿಸುತ್ತೇವೆ ನೋಡು!

ವೆಂಕಣ್ಣನು:— ಓಹೋ, ತಮ್ಮಂಥವರ ಪ್ರೀತಿವಿಶ್ವಾಸಗಳ ಆಶ್ರಯಕ್ಕೆ ನಾನು ಸದಾಸಿದ್ಧನು ನಡೆಯಿರಿ, ನನ್ನದೇನು ಅಳಬೇಕಾಗಿದೆ ಮನೆಯೊಳಗೆ!

ಮುಂದೆ ತನ್ನ ಬುದ್ಧಿಯ ಬೆಳಕನ್ನು ಬೀರಿ ಖಾನನನ್ನು ಒಲಿಸಿಕೊಂಡು, ನಮ್ಮ ವೆಂಕಣ್ಣನು ಖಾನನಿಗೆ ದಿವಾಣನಾಗಿಬಿಟ್ಟನು. ಅವನಿಗೆ ಆಗ ಶ್ರೀಗಳ

ವರ ಶುಭಾಶೀರ್ವಾದವು ತಟ್ಟನೇ ನೆನಪಾಗಿ, ಒಳಗಿಂದೊಳಗೇನೆ ಹರ್ಷಪುಲ ಕಿತನಾಗಿ ಗುರುಗಳಿಗೆ ಮನಸಾ ನಮಿಸಿದನು. ದಿವಾಣನಾಗಿ ಕೆಲ ಕಾಲ ಗತಿಸಿದ ಮೇಲೆ, ಶ್ರೀಗಳವರು ಸ್ವಯಂ ವೆಂಕಣ್ಣನ ಮನೆಗೆ ಬರುವವ ರಾದರು. ಆಗಂತೂ ವೆಂಕಣ್ಣನ ಹರ್ಷ ಹಿಗ್ಗುಗಳು ಹೊಟ್ಟೆ ಹಿಡಿಸಲಾರದೆ, ಆನಂದಾಶ್ರುಗಳ ರೂಪವಾಗಿ ಉಕ್ಕಿ ಹರಿಯತೊಡಗಿದವು ಪೂಜೆ ಭೋಜ ನಾದಿಗಳು ನಡೆದವು ವೆಂಕಣ್ಣನಿಂದ ಶ್ರೀಗಳವರ ಹಿರಿಮೆಯನ್ನು ಕೇಳಿ, ಖಾನನಿಗೂ ಒಮ್ಮೆ ಶ್ರೀಗಳನ್ನು ಕಂಡುಕೊಳ್ಳಬೇಕೆಂದೆನಿಸಿತು. ಗುರುಗಳ ಮಹಿಮೆಯನ್ನರಿಯದೆ, ಒಂದು ದಿನ ಮಾಂಸವನ್ನೇ ಒಂದು ತಬಕದಲ್ಲಿಟ್ಟು ಮುಚ್ಚಿಕೊಂಡು, ರಾಯರ ಮುಂದೆ ಇಟ್ಟು 'ಸ್ವೀಕರಿಸಬೇಕು ನನ್ನೀ ಕಾಣಿಕೆ ಯನ್ನು' ಎಂದು ಹೇಳಿದನು. ರಾಯರು ಖಾನನ ಒಳ ಇಂಗಿತವನ್ನರಿತವರಾಗಿ ಆ ತಂದ ತಬಕಕ್ಕೆ ತೀರ್ಥ ಸಿಂಪಡಿಸಿ, ಮಾಂಸವನ್ನೆಲ್ಲ ಹಣ್ಣುಹಂಪಲುಗಳನ್ನಾಗಿ ಪರಿವರ್ತಿಸಿಬಿಡುವವರಾದರು. ಖಾನನ ಮುಖವು ಹುಚ್ಚಿಟ್ಟು ಹೌಹಾರಿ ಹೋದನು. ತಾನು ಗುರುಗಳ ಯೋಗ್ಯತೆಯನ್ನು ಅರಿಯದೆ ಪರೀಕ್ಷಿಸ ಹೋಗಿದ್ದಕ್ಕೆ ಹಳಹಳಿಸುವವನಾದನು ಮನದಲ್ಲಿ. ರಾಯರಲ್ಲಿ ಖಾನನ ಭಕ್ತಿ ವಿಶ್ವಾಸಗಳು ದೃಢವಾಗಿ ನೆಲಿಸಹತ್ತಿದವು.

ಆಗ ಮಂತ್ರಾಲಯವು–ಮಂಚಾಲಿಯು–ತುರ್ಕರಿಂದ ತುಂಬಿದ ಗ್ರಾಮ ವಾಗಿತ್ತು. ಅದು ಒಬ್ಬ ಖಾನನ ಗುರುವಿನ ಇನಾಮು ಗ್ರಾಮವಾಗಿತ್ತು. ಆ ಮಂತ್ರಾಲಯವನ್ನೇ ತಮಗೆ ಕೊಡಬೇಕೆಂದು ವೆಂಕಣ್ಣನನ್ನು ಕೇಳಿ ಕೊಳ್ಳುವವರಾದರು ಹಿಂದೆ ಪ್ರಲ್ಹಾದ ರಾಜನು ಇಲ್ಲಿಯೇ ಯಜ್ಞಯಾಗ ಮಾಡಿದ್ದು. ಮಂತ್ರಗಳ ಮನೆಯೇ ಮಂತ್ರಾಲಯ. ಅದಕ್ಕೇನೇ ರಾಯರಿಗೆ ಅದರ ಮೇಲೆ ಜೀವ

ತಾನೇ ಆದವಾನಿಗೆ ಸರ್ವಾಧಿಕಾರವುಳ್ಳವನಾಗಿರುವಾಗ "ಮಂತ್ರಾಲಯ ದಂಥ ಚಿಕ್ಕ ಹಳ್ಳಿಯನ್ನೇಕೆ ಬೇಡುತ್ತೀರಿ" ಎಂದು ವೆಂಕಣ್ಣ ಶ್ರೀಗಳನ್ನು ಕೇಳಿದ. "ಬೇರೆ ಬೇಕಾದ್ದನ್ನು ಬೇಡಿರಿ ನಾನು ಕೊಡುತ್ತೇನೆ" ಎಂದೂ ಹೇಳಿ ದನು. ಆದರೆ ಮಂತ್ರಾಲಯವೇ ಬೇಕಾಗಿರುತ್ತದೆಂದು ಹೇಳಿದರು ರಾಯರು. ಸರಿ, ರಾಯರ ಕೋರಿಕೆಯಂತೆ ಮಂತ್ರಾಲಯವು ವೆಂಕಣ್ಣನಿಂದ ಇನಾಮಾಗಿ ಬಂದಿತು ಶ್ರೀಗಳವರಿಗೆ.

ಮುಂದೆ, ವೆಂಕಣ್ಣನು ರಾಯರ ಆಜ್ಞೆಯಂತೆ ಒಂದು ಶಿಲೆಯಿಂದ ವೃಂದಾವನವನ್ನು ಮಾಡಿಸಿದನು ಅದು ರಾಯರಿಗೆ ಒಪ್ಪಿಗೆಯಾಗಿಲ್ಲ. ಅಲ್ಲಿಯೇ ಸಮೀಪದಲ್ಲಿ ಮಾಧವಾರ (ಮಹಾದ್ವಾರ) ಎಂಬ ಊರ ದಂಡೆಯ ಮೇಲಿರುವ ಒಂದು ಶಿಲೆಯನ್ನು ತಂದು, ಅದರಿಂದಲೇ ತಮಗೆ ವೃಂದಾವನ ಮಾಡಿಸಲು ಹೇಳಿದರು ಯಾಕಂದರೆ ಹಿಂದೆ, ರಾಮನು ವನವಾಸದಲ್ಲಿದ್ದ ಕಾಲಕ್ಕೆ ಅದೇ ಶಿಲೆಯ ಮೇಲೆ ಕೆಲಕಾಲ ಕುಳಿತಿದ್ದನಂತೆ!

ಲಕ್ಷ್ಮಣ – ಅಣ್ಣಾ, ಬಹಳ ಹೊತ್ತಾಯಿತು. ಮುಂದೆ ದಯಮಾಡಿಸಬೇಕು.

ರಾಮ:— ಲಕ್ಷ್ಮಣಾ, ನಾನು ಎಷ್ಟು ಗಳಿಗೆ ಈ ಶಿಲೆಯ ಮೇಲೆ ಕುಳಿತಿರುವೆನೋ ಅಷ್ಟು ನೂರು ವರ್ಷಗಳ ವರೆಗೆ ಈ ಶಿಲೆಯು ಪೂಜೆ ಪಡೆಯುತ್ತದೆ, ಈ ಭೂಲೋಕದಲ್ಲಿ!

ಅದಕ್ಕೇನೇ ಅದೇ ಶಿಲೆಯನ್ನೇ ಮಾಧವಾರದಿಂದ ತರಲು ಹೇಳಿದ್ದು ತಮಗಾಗಿ ಮೊದಲು ಮಾಡಿಸಿದ ವೃಂದಾವನವನ್ನು ಶ್ರೀವಾದೀಂದ್ರರಿಗಾಗಿ ಇರಿಸಿಬಿಟ್ಟು, ಈ ಮಾಧವಾರ ಶಿಲೆಯ ವೃಂದಾವನವನ್ನು ತಮಗಾಗಿಟ್ಟು ಕೊಂಡರು. ಮುಂದೆ ವೆಂಕಣ್ಣನು, ಗುರುಗಳ ಅಪ್ಪಣೆಯ ಮೇರೆಗೆ, ವೃಂದಾವನವನ್ನು ಸಿದ್ಧಮಾಡಿಸಿ ಏಳುನೂರು ಸಾಲಿಗ್ರಾಮಗಳನ್ನು ಕುಂಡದಲ್ಲಿ ಕೆಳಗೆ ಇರಿಸಿ, ಮೇಲೆ ವೃಂದಾವನವನ್ನು ಸ್ಥಾಪಿಸುವವನಾದನು. ಖಾನನೂ ಶ್ರೀಗಳಿಗಾಗಿ ಅನೇಕ ಜಹಾಗೀರು ಇನಾಮುಗಳನ್ನು ಹಾಕಿಕೊಟ್ಟಿರುವನು. ತನ್ನ ಸ್ಮಾರಕವನ್ನೂ ಕೊಂಚ ಇರಿಸಿ, ಮಠವನ್ನು ಕಟ್ಟಿಸಬೇಕೆಂದು ಗುರುಗಳನ್ನು ಬೇಡಿಕೊಂಡನು ಖಾನನು "ಖಾನನ ಸ್ಮಾರಕ"ವಾಗಿ, ವೃಂದಾವನದಲ್ಲಿ ಮೇಲ್ಗಡೆಯಲ್ಲಿ ಕಟ್ಟಿದ ಭವಂತಿಗೆ ನಾಲ್ಕು ಮಗ್ಗಲಿಗೆ ನಾಲ್ಕು ಗುಮುಟಗಳನ್ನು ಇಸ್ಲಾಮೀ ಪದ್ಧತಿಯಲ್ಲಿ ಮಾಡಿಸಿರುವದನ್ನು ಇಂದಿಗೂ ಎಲ್ಲರೂ ನೋಡಬಹುದು.

ವೆಂಕಣ್ಣನು, ತನ್ನ ಮನೆತನಕ್ಕೂ ಮಂಗಳಾರತಿ ಹಸ್ತೋದಕಗಳ ಹಕ್ಕು ಸಂಪ್ರದಾಯಗಳು ದೊರೆಯುವಂತೆ ಬೇಡಿಕೊಳ್ಳುವವನಾದನು ಗುರುಗಳಿಗೆ.

ಇಂದಿಗೂ ಮಠದ ಮಂಗಳಾರತಿ ಹಸ್ತೋದಕಗಳ ನಂತರ, ವೆಂಕಣ್ಣನ ಮಂಗ ಳಾರತಿ ಹಸ್ತೋದಕಗಳ ಪರಿಪಾಠವನ್ನು ಮಠದವರು ಮಂತ್ರಾಲಯದಲ್ಲಿ ನಡೆ ಸುತ್ತಲಿದಾರೆ.

# ಪವಾಡಗಳು

## ೧. ರಾಜಪುತ್ರನನ್ನು ಬದುಕಿಸಿದ್ದು

ಸಂಚಾರ ಮಾಡುತ್ತ, ರಾಯರೊಮ್ಮೆ ಒಂದು ರಾಜ್ಯಕ್ಕೆ ಬಂದರು. ಅಲ್ಲಿಯ ರಾಜಕುಮಾರನಿಗೆ ಆಕಸ್ಮಾತ್ ನಾಗರಹಾವು ಕಚ್ಚಿ, ಅವನು ಸತ್ತು ಹೋಗಿದ್ದನು. ಈ ಅನಾಹುತದಿಂದ ಉಂಟಾದ ಹಾಹಾಕಾರವು ರಾಯರಿಗೆ ತಿಳಿಯಿತು. ಕೂಡಲೇ ಅರಮನೆಗೆ ಧಾವಿಸಿ ಹೋಗುವವರಾದರು ಮರುಕ ಗೊಂಡವರಾಗಿ. ಆ ಕಚ್ಚಿಹೋದ ಸರ್ಪವನ್ನು ಅಲ್ಲಿ ತರಿಸಿ, ಅದು ತಾನು ಬಿಟ್ಟುಕೊಟ್ಟ ವಿಷವನ್ನೆಲ್ಲ ಆ ರಾಜಪುತ್ರನ ಮೈಯೊಳಗಿಂದಲೆ ಹೀರಿಕೊಳ್ಳಲು ಹೇಳಿದರು ಗುರುಗಳು ಅದಕ್ಕೆ ಆ ಸರ್ಪವು ಅವರ ಮಾತು ಕೇಳಿ ವಿಷವನ್ನೆಲ್ಲ ಹೀರಿಕೊಂಡು ಹೋಯಿತು. ರಾಜಕುಮಾರನು ನಿದ್ರೆಯಿಂದ ಎದ್ದಂತೆ ಕಣ್ಣು ಒರೆಸಿಕೊಂಡು ಏಳುವವನಾದನು. ಶ್ರೀಗಳವರ ಈ ತಪಃಪ್ರಭಾವ ವನ್ನು ನೋಡಿ ಎಲ್ಲರೂ ಚಕಿತರಾಗಿ ಗುರುಗಳನ್ನು ಕೊಂಡಾಡಹತ್ತಿದರು. ರಾಜರಾಜ್ಞಿಗಳಿಗಂತೂ ಆನಂದದ ಮಹಾದ್ವಾರವನ್ನೇ ತೆರೆದುಬಿಟ್ಟಂತಾಯಿತು. ಮುಂದೆ ರಾಜನು ಶ್ರೀಗಳವರನ್ನು ತಮ್ಮ ಮನೆಯಲ್ಲಿ ಕೆಲ ದಿನ ಇಟ್ಟುಕೊಂಡು ಶ್ರದ್ಧೆಯಿಂದ ಸೇವಿಸಿ, ಅವರಿಗೆ 'ಕೃಷ್ಣಾಪೂರ' ಗ್ರಾಮವನ್ನು ಇನಾಮಾಗಿ ಬಿಟ್ಟುಕೊಟ್ಟನು.

## ೨. ಅಪಮೃತ್ಯು ಪರಿಹಾರ

"ಭೃತ್ಯಗೆ, ಬಂದಪಮೃತ್ಯು" ಕಳೆದು ಸುಜಿಪಿತ್ತು ಪೊರೆದ ಪುರುಷೋ ತ್ತಮಃ ದಾಸಾ, ರಾಘವೇಂದ್ರ ರಾಜಿತ ಗುಣಸಾಂದ್ರಾ"

—ಜಗನ್ನಾಥದಾಸರು

ಕುಂಭಕೋಣದಲ್ಲಿ ವೆಂಕಣ್ಣನೆಂಬ ಗೃಹಸ್ಥನಿದ್ದನು. ರಾಯರಿಗೂ ಅವನಿಗೂ, ಮೈತ್ರಿಋಣಾನುಬಂಧ ಚನ್ನಾಗಿತ್ತು. ಅವನ ಮನೆಯೊಳಗೆ ಒಮ್ಮೆ ಸಮಾರಾಧನೆ ನಡೆದಿತ್ತು. ಪುಣ್ಯಾಹವಾಚನ, ಪೂಜೆ ಪುರಸ್ಕಾರಗಳನ್ನು ಸಾಂಗ ವಾಗಿ ನೆರವೇರಿಸಿ ನಮ್ಮ ವೆಂಕಣ್ಣನು ಒಳ್ಳೇ ಸಂತೋಷದಲ್ಲಿದ್ದನು. ಆಗ ಶ್ರೀಗಳು ಕುಂಭಕೋಣಕ್ಕೆ ದಯಾಮಾಡಿಸಿದರು. ವೆಂಕಣ್ಣನು ದೇವರ ಮನೆಯಿಂದ ಹೊರಗೆ ಬರುವಾಗ್ಗೆ, ದುರ್ದೈವದಿಂದ, ಚೌಕಟ್ಟಿಗೆ ಅವನ ತಲೆಯು ಅಪ್ಪಳಿಸಿ ಒಳ್ಳೇ ಪೆಟ್ಟು ತಗಲಿ, ಭೋಳಿ ಬಂದು ನೆಲದ ಮೇಲೆ ಕುಪ್ಪ ಳಿಸಿ ಬಿದ್ದುಬಿಟ್ಟನು. ಕೂಡಲೇ ಸತ್ತುಹೋದನು. ಮನೆಯವರೆಲ್ಲ ದುಃಖ ಸಾಗರದಲ್ಲಿ ಮುಳುಗಿ ಹೋಗಿ, ಗೋಳೋ ಎಂದು ಅಳತೊಡಗಿದರು. ಈ ಸುದ್ದಿಯನ್ನು ಕೇಳಿ ರಾಯರು, ದಯಾರ್ದ್ರ ಹೃದಯದಿಂದ ಅವನ ಮನೆಗೆ ಧಾವಿಸಿ ಬಂದರು. ಆ ವೆಂಕಣ್ಣನನ್ನು ತಮ್ಮೆದುರಿಗೆ ತರಲು ಹೇಳಿದರು. ಕೂಡಲೇ ಪರೋಪಕಾರ ಸ್ವಭಾವವುಳ್ಳ ರಾಯರು ಶ್ರೀ ಹರಿಯನ್ನು ಧ್ಯಾನಿಸಿ ತಮ್ಮ ಕಮಂಡಲೋದಕದಿಂದ ಆ ದೇಹಕ್ಕೆ ಪ್ರೋಕ್ಷಿಸುವವರಾದರು. ವೆಂಕಣ್ಣನಿಗೆ ಆಗ ಪುನರ್ಜನ್ಮವಾಯಿತು ಶ್ರೀಗಳ ಅನುಗ್ರಹದಿಂದ!

## ೩. ಹಾದೀ ತಪ್ಪಿದ ಮಗುವನ್ನು ಕಾಪಾಡಿದ್ದು

ಬಿಸಿಲಿನಿಂದಳಲುವ ಶಿಶುವಿಗೆ ಛೈಲಾಗಸದಲಿ ನಿಲ್ಲಿಸಿದ್ಯೋ।
ಅಸಮಮಹಿಮನೇ, ರಾಘವೇಂದ್ರರಾಜಿತ ಗುಣಸಾಂದ್ರಾ॥

—ಜಗನ್ನಾಥದಾಸರು

ಮಂತ್ರಾಲಯದ ಹತ್ತಿರ 'ಗಣದಾಳ' ಎಂಬ ಒಂದು ಊರು. ಅಲ್ಲಿ ಜೀವಣ್ಣರಾಯನೆಂಬ ಗೃಹಸ್ಥನಿದ್ದನು. ಅವನು ರಾಯರ ಶಿಷ್ಯ. ಅವನು ಕುಟುಂಬ ಸಮೇತನಾಗಿ ಮಂತ್ರಾಲಯಕ್ಕೆ ರಾಯರ ದರ್ಶನಕ್ಕೆ ಬಂದನು. ತುಂಗಭದ್ರೆಯಲ್ಲಿ ಸ್ನಾನ ಮಾಡಿ ಹೊರಗೆ ಬರುವಷ್ಟರಲ್ಲಿ ಅವನ ಒಬ್ಬ ಮಗನು ಕಾಣೆಯಾದನು. ಎಷ್ಟು ಹುಡುಕಿದರೂ ಸಿಗಲಿಲ್ಲ ಆ ಮಗು! ಪಾಪಕ್ಷಯ ವಾಗಲೆಂದು ಕಾಶಿಗೆ ಹೋದರೆ, ಕುಲಕ್ಷಯವಾಗಲೆಂದು ಮೊಸಳೆ ಎಳೆದೊಯ್ದಂ ತಾಯಿತು. ಎಂಬಂತೆ, ಜೀವಣ್ಣನ ಗತಿಯಾಯಿತು. ಕಡೆಗೆ ಆ ದಂಪತಿಗಳು

ರಾಯರನ್ನು ಪ್ರಾರ್ಥಿಸುತ್ತ ಅವರಿಗೇನೇ ಮೊರೆ ಹೊಕ್ಕರು ಆ ಕರುಣಾಸಾಗರ ರರಿಗೆ ಮರುಕ ಹುಟ್ಟಿ ಕೂಡಲೇ, ತಪ್ಪಿಸಿಕೊಂಡು ತಬ್ಬಲಿಯಾಗಿ ಬಿಸಿಲಿನಲ್ಲಿ ಬಳಲುತ್ತಿದ್ದ ಆ ಮಗುವಿನ ಕಡೆಗೆ ಧಾವಿಸಿದರು. ಅದು ಗಣದಾಳ ರಸ್ತೆಯ ಹತ್ತಿರ ಒಂಟಿಯಾಗಿ ಹಸಿವುಬಾಯಾರಿಕೆಗಳಿಂದ ಬಳಲಿ ತೊಳಲುತ್ತಿತ್ತು! ಶ್ರೀಗಳು ತಮ್ಮ ಶಾಟಿಯನ್ನು ಆಕಾಶಕ್ಕೆ ಹಾರಿಸಿ ಅದರಿಂದಲೇ ಆ ಬಾಲಕನಿಗೆ ನೆರಳುಂಟುಮಾಡಿ, ತೀರ್ಥಪ್ರೋಕ್ಷಣೆಯಿಂದ ಹಸಿವುನೀರಡಿಕೆಗಳನ್ನು ಹಿಂಗಿಸಿ ಮಠಕ್ಕೆ ಮರಳಿದರು. ಈ ಸುದ್ದಿಯು ಜೀವಣ್ಣನ ಕಿವಿಗೆ ಮುಟ್ಟಿತು ಆಗ ಆ ದಂಪತಿಗಳಿಗಾದ ಆನಂದವನ್ನು ವರ್ಣಿಸಲಾಸಲ್ಲ! ಎಲ್ಲರೂ ಹಿರಿಹಿರಿ ಹಿಗ್ಗಿ ರಾಯರ ಜಯಜಯಕಾರ ಮಾಡತೊಡಗಿದರು

## ೬. ಗುರುಪಾದನು

ರಾಯರ ದಿಗಂತ ಕೀರ್ತಿಯನ್ನು ಕೇಳಿ ಕೆಲ ತುಂಟ ಪೋರರು, ರಾಯ ರನ್ನು ಪರೀಕ್ಷಿಸಬೇಕೆಂದು ಮಾಡಿಕೊಂಡರು ಒಂದು ದಿನ. "ಶೆಟ್ಯಾ" ಎಂಬು ವವನನ್ನು ಸುಳ್ಳು ಸುಳ್ಳೇ ಹೆಣ ಮಾಡಿ, ಕೈವಾಲಿಯನ್ನು ಹೊತ್ತುಕೊಂಡು ಶ್ರೀಗಳಲ್ಲಿ ಬಂದು ಅಳುತ್ತ ಅಳುತ್ತ,

ತುಂಟರು— ಗುರುಗಳೇ ಈ ನಮ್ಮ ಚಿಗವ್ವನ ಮಗ "ಶೆಟ್ಯಾ" ನೋಡಿರಿ ಒಮ್ಮಿಂದೊಮ್ಮೆಲೆ ಸತ್ತುಹೋಗಿ ಹೆಣವಾಗಿ ಬಿಟ್ಟಿದ್ದಾನೆ. (ಅಳುತ್ತ) ನೀವು ಮೊನ್ನೆ ಒಬ್ಬ ಹಾರುವನ ಹೆಣವನ್ನು ಬದುಕಿ ಸಿರುವಿರೆಂದು ಕೇಳಿದ್ದೇವೆ ಹಾಗೆಯೇ ಈ ನಮ್ಮ ಸತ್ತ ಶೆಟ್ಯಾ ನನ್ನೂ ಬದುಕಿಸಿರಿ

ಶ್ರೀ — (ಒಳ ದೃಷ್ಟಿಯಿಂದ ಆ ಕುಚೋದ್ಯಗಾರರ ಕುಚೋದ್ಯವನ್ನರಿತವ ರಾಗಿ, ನಸು ನಕ್ಕು) ನಿಜ, ಮೊನ್ನೆ ಆ ಹಾರುವನ ಜೀವ ಪೂರ್ತಿ ಯಾಗಿ ಹೋಗಿರಲಿಲ್ಲವೆಂದು ಅವನು ಬದುಕಿದನು. ಆದರೆ ಈ ನಿಮ್ಮ ಶೆಟ್ಯಾನು ಸಂಪೂರ್ಣವಾಗಿ ಸತ್ತೇ ಹೋಗಿರುವನು. ಪಾಪ! ಅವನು ಜೀವಂತನಾಗಲಾರನು.

ತುಂಟರು:– ( ಹೀಯಾಳಿಸುತ್ತ, ಗಹಗಹಿಸಿ ನಗುತ್ತ ) ಏಳಲೋ ಪ ಶೆಟ್ಟ್ಯಾ, ಸತ್ತು ಹೋಗಿರುವನಂತೆ, ಬದುಕಲಾರನಂತೆ! ಈ ಹಾರುವರ ಗುರುಗಳು ಹೀಗೆಯೇ! ಏಳಲೇ ಹೋಗೋಣ!

ಆದರೆ ಆ ಶೆಟ್ಟ್ಯಾನು ನಿಜವಾಗಿಯೂ ಸತ್ತುಹೋಗಿದ್ದನು. ಹೆಣವೇ ಆಗಿದ್ದನು ಎಷ್ಟೇ ಕುಲುಕಿ ಅಲುಗಾಡಿಸಿದರೂ ಆ ಸತ್ತ ಶೆಟ್ಟ್ಯಾ ಮೇಲೆ ಏಳಲೇ ಇಲ್ಲ. ಎಲ್ಲರೂ ಗಾಬರಿಯಾದರು ಎಲ್ಲರ ನಗೆ ಹೋಗಿ ಹೊಗೆಯಾಗುವ ಹೊತ್ತು ಬಂದಿತು! ಕೊನೆಗೆ ಮರಣದಂಡನೆಗೆ ಗುರಿಯಾಗುವ ಪ್ರಸಂಗ ಬಂದಿತು ಆ ಕಿಡಿಗೇಡಿ ಹುಡುಗರಿಗೆಲ್ಲ!

ಆಮೇಲೆ ಎಲ್ಲರಿಗೂ ತಮ್ಮ ಕಿಳ್ಳಿಗಾಗಿ ಕೆಟ್ಟೆನಿಸಿ, ರಾಯರ ಸನ್ನಿಧಿಗೆ ಬಂದು ಅವರನ್ನೇ ಮೊರೆಹೊಕ್ಕು ಶೆಟ್ಟ್ಯಾನನ್ನು ಹೇಗಾದರೂ ಬದುಕಿಸಿ ಉಳಿಸ ಬೇಕೆಂದು ಅಂಗಲಾಚಿ ಬೇಡಿಕೊಳ್ಳಹತ್ತಿದರು ಶ್ರೀಗಳು ಕರುಣಾಳುಗಳು! ತಮ್ಮ ತಪೋಬಲದಿಂದ ಅವನನ್ನು, ಆ ಶೆಟ್ಟ್ಯಾನನ್ನು ಬದುಕಿಸಿದರು ಗುರುಗ ಳಿಂದ ಅವನಿಗೆ ಪುನರ್ಜನ್ಮವಾದದ್ದರಿಂದ ಆ ಶೆಟ್ಟ್ಯಾನಿಗೆ ಗುರುಪಾದನೆಂದು ಕರೆಯಹತ್ತಿದರು ಎಲ್ಲರೂ ಆ ಊರಲ್ಲಿ ಭಾಗವತರನ್ನು ತಡೆಯುವದೆಂದರೆ ಬೆಂಕಿಯನ್ನು ತಡೆದಂತೆ ಎಂಬುದನ್ನು ಎಲ್ಲರೂ ಮನಗಾಣುವವರಾದರು.

### ೫. ಸೀಕರಣಿಯೊಳಗೆ ಮುಳುಗಿದ ಹುಡುಗ

ಚೂತರಸಫಲದಿ ಪೋತ ಮುಳುಗೆ ಮೃತಿ ಭೀತಿ ಬಿಡಿಸಿದ
ಅನಾಥ ರಕ್ಷಕಾ, ರಾಘವೇಂದ್ರ ರಾಜಿತ ಗುಣಸಾಂದ್ರಾ ||

—ಜಗನ್ನಾಥದಾಸರು

ಗದಗ ತಾಲೂಕಿನಲ್ಲಿ ಕಿಟಗೇರಿ ಎಂಬದೊಂದು ಗ್ರಾಮವಿದೆ. ಅಲ್ಲಿ ರಘುನಾಥರಾಯ ದೇಶಮುಖನೆಂಬ ಗೃಹಸ್ಥನಿದ್ದನು. ಅವನೊಮ್ಮೆ ಶ್ರೀಗಳನ್ನು ಕರೆದು ಮನೆಯೊಳಗೆ ಭಿಕ್ಷೆ ಮಾಡಿಸಿದನು. ಅವನಿಗೆ ಅಪರೂಪ ವಾಗಿ ಒಂದೇ ಒಂದು ಮಗುವಾಗಿತ್ತು ಆಗ ವಸಂತಕಾಲ. ಒಳ್ಳೇ ಮಧುರ ಮಾವಿನಹಣ್ಣುಗಳ ಸಮೃದ್ಧಿ ಸಮಯವಾಗಿತ್ತು ಆಗ. ಭೋಜನಕ್ಕೆ ಸಮೃದ್ಧ

ವಾಗಿ ಮಾವಿನಹಣ್ಣಿನ ಸೀಕರಣೆಯನ್ನು ಹಿಂಡಿಸಿ, ಕೊಳಗಗಳನ್ನು ತುಂಬಿಸಿ ಇಡಿಸಿಬಿಟ್ಟನು ಆ ರಘುನಾಥರಾಯನು ಅವನ ಮಾವಿನಹಣ್ಣೇ ಮಗನಿಗೆ ಮುಳುವಾಗಿ ಬಂತು ಪಾಪ! ಎಲ್ಲರೂ ಭೋಜನಕ್ಕೆ ಕುಳಿತರು ಸೀಕರಣೆ ಬಡಿಸಲು ರಘುನಾಥರಾಯನೇ ಸ್ವಯಂ ಸೀಕರಣೆಯ ಕೊಳಗಕ್ಕೆ ಕೈಹಾಕಿ ಬಳಸಿಕೊಳ್ಳುವಾಗ್ಗೆ, ಬುಡದಲ್ಲಿ ಏನೋ ಗಟ್ಟಿಯಾಗಿ ಕೈಗೆ ಹತ್ತಿದಂತಾಯಿತು. ಏನೆಂದು ಹೊರಗೆ ತೆಗೆದು ನೋಡಲು, ಅದು ಅವನ ಮುದ್ದುಮಗನ ಹೆಣವೇ ಆಗಿತ್ತು ರಘುನಾಥನ ಎದೆ ಬಿಚ್ಚಿ ಒಡೆದೇ ಹೋಯಿತು ಆ ದುರಂತ ದೃಶ್ಯ ನೋಡಿ! ಮುಂದೇನು ಮಾಡಬೇಕೆಂಬುದು ತಿಳಿಯದೆ, ದಿಕ್ಕೇ ತೋಚದವನಾಗಿ, ಒಂದು ಮರೆಯಲ್ಲಿ ಮೋರೆ ಮುಚ್ಚಿಕೊಂಡು ಮುಳು ಮುಳು ಅಳಲಾರಂಭಿಸಿದನು ಪಾಪ, ತನ್ನ ಅಪರೂಪ ಮಗನಿಗಾಗಿ ಎಲ್ಲರ ಊಟವಾಯಿತು. ಈ ಅನಿಷ್ಟ ಘಟನೆ ರಾಯರ ಕಿವಿಗೆ ಮುಟ್ಟಿತು, ಅವರಿಗೂ ತುಂಬಾ ವ್ಯಸನವಾಯಿತು. ಅನ್ಯರ ದುಃಖದುಮ್ಮಾನಗಳಲ್ಲಿ ಸಮಭಾಗಿಗಳಾಗಿರುವದು ಸಾಧು ಸ್ವಭಾವವಲ್ಲವೇ? ಕೂಡಲೇ ಆ ಮಗುವನ್ನು ತರಿಸಿ ಅದಕ್ಕೆ ಶ್ರೀಗಳವರು ಶಂಖೋದಕವನ್ನು ಸಿಂಪಡಿಸಿದರು. ಮಲಗಿದ ಮಗು ಮೇಲೆದ್ದು ಆಡುವಂತೆ ಅದೂ ಓಡಾಡಿ ಆಡಲಾರಂಭಿಸಿತು, ಶ್ರೀಗುರು-ಕೃಪೆಯಿಂದ! ಎಲ್ಲರೂ ಈ ಅಗಾಧ ಚಮತ್ಕಾರವನ್ನು ಕಣ್ಣಾರೆ ಕಂಡು ಆನಂದಾಶ್ರುಗಳಿಂದ ಅಭಿಷೇಕವನ್ನೇ ಆರಂಭಿಸಿದರು ಭೂಮಿಗೆ. ಅಗಮ್ಯ ಮಹಿಮರ ನೆಲೆ ಯಾರಿಗೆ ತಾನೇ ಸಿಗಬಹುದು?

## ೬. ಬಡವಿಯ ಬಾಣಂತಿತನ

ಮಳಲ ಮಾರ್ಗದೊಳು ಲಲನೆ ಪ್ರಸೂತಿಸೆ ಪುಲಿನ ಕಮಲದೊಳು ।
ತೋರಿದಿ ಜಲವ ರಾಘವೇಂದ್ರ ರಾಜಿತ ಗುಣಸಾಂದ್ರಾ ॥

— ಜಗನ್ನಾಥದಾಸರು.

ಒಮ್ಮೆ ರಾಯರು ಸಂಚಾರ ಮಾಡುತ್ತಿದ್ದರು. ಹಾದಿಯೊಳಗೆ ಅಡವಿಯಲ್ಲಿ ಒಬ್ಬ ಚಕ್ಕಡಿಯವನ ಗರ್ಭಿಣಿ ಸ್ತ್ರೀಯು ಬೇನೆ ತಿಂದು ಅಲ್ಲಿಯೇ ಪ್ರಸವಿಸುವವಳಾದಳು. ನೆರಳು ನೀರುಗಳಿಲ್ಲದ ಆ ಬರಡು [illegible] ಆ ಬಾಣಂತಿಯು ಅವಸ್ಥೆ ಅವಳೇ ಬಲ್ಲಳು. [illegible]

ಸುಮ್ಮನೇ ಹೇಗೆ ಕುಳಿತಾರು? ಅಲ್ಲಿ ಎಲ್ಲರೂ ಗಾಬರಿಯಾಗಿ, ಹೌಹಾರಿ ಬಿಟ್ಟರು! ಶ್ರೀಗಳು ಅವಳ ಅಸಹಾಯ ಸ್ಥಿತಿಯನ್ನರಿತು, ಮರುಕಗೊಂಡವ ರಾಗಿ, ಆ ಬಾಣಂತಿಗೂ, ಅವಳ ಕೂಸಿಗೂ ಇದ್ದಲ್ಲಿಯೇ ನೆರಳು ನೀರುಗಳನ್ನು ಕಲ್ಪಿಸಿಕೊಟ್ಟು ಅವಳನ್ನು ಹರಸುವವರಾದರು! ಪರೋಪಕಾರವೇ ಮಹಾ ತ್ಮರ ದಿನಚರಿ!

## ೭. ಒನಿಕೆ ಕೊನರಿ ಮಾವಿನಮರ

ಕ್ಷಿಪ್ರದಿ ತೋರಿದಿ ವಿಪ್ರರ ಮಹಿಮೆಯ ಆ ಪೃಥಿವೀಶಗೆ।
ಅಪ್ರತಿಗುರುವೇ, ರಾಘವೇಂದ್ರ ರಾಜಿತ ಗುಣಸಾಂದ್ರಾ॥

—ಜಗನ್ನಾಥದಾಸರು

ಶಿರಸಂಗಿ ದೇಸಾಯರು ಲಿಂಗವಂತರು ಹಾಗು ಒಳ್ಳೇ ದಾನಶೂರರು. ಅವರಿಗೊಮ್ಮೆ ರಾಯರ ವಿಷಯಕ್ಕೆ ಕೊಂಚ ಅನುಮಾನಶಂಕೆಗಳು ಮೂಡಿ ದವು ಊರೊಳಗಿನ ಬ್ರಾಹ್ಮಣರಿಗಿರುವ ಎಲ್ಲಾ ಇನಾಮು ಜಹಾಗೀರುಗಳ ನ್ನೆಲ್ಲ ಸೆಳೆದು ಕಸಿದುಕೊಂಡು ಬಿಡುವವರಾದರು ದೇಸಾಯರು ಬ್ರಾಹ್ಮಣ ರೆಲ್ಲರೂ ಗತಿಯೇ ಇಲ್ಲದವರಾದರು. ಕೊನೆಗೆ ಗುರುಗಳಿಗೆ ಮೊರೆ ಹೊಕ್ಕು ತಮ್ಮ ದೈನ್ಯಾವಸ್ಥೆಯನ್ನು ತೋಡಿಕೊಂಡರು. ಗುರುಗಳಿಗೆ ಕರುಣೆ ವಾತ್ಸಲ್ಯ ಗಳು ಉಕ್ಕಿ ಬಂದವು ತಮ್ಮ ಭಕ್ತರಿಗಾಗಿ.

ಶ್ರೀಗಳಿಗೂ ದೇಸಾಯರಿಗೂ ಸಂಭಾಷಣೆ ನಡೆಯಿತು :—

ದೇ — ನಿಮ್ಮ ಮಹಿಮೆಯನ್ನೆಲ್ಲ ನಾವು ಕೇಳುತ್ತಲಿದ್ದೇವೆ. ಆದರೆ ಒಮ್ಮೆ ನಿಮ್ಮ ಪ್ರಭಾವವನ್ನು ಕಣ್ಣಾರೆ ಕಂಡುಕೊಳ್ಳಬೇಕೆಂದು ನಮಗೆ ಆಶೆ ಯಾಗಿದೆ! ಇದೋ ನೋಡಿರಿ, ಈ ಒನಿಕೆಗೆ ಬೇಕೆಂತಲೇ ಉಕ್ಕಿನ ಕಟ್ಟು ಹಾಕಿಸಿ ಇರಿಸಿದ್ದೇವೆ. ಅದರ ಮೇಲೆ ತಮ್ಮ ಪ್ರಭಾವ ಬೀರಿ, ಅದು ಕೊನರಿ ಚಿಗುರುವಂತೆ ಮಾಡೋಣವಾಗಬೇಕು! ಅದು ಸಂಭ ವಿಸಿದ್ದಾದರೆ ನಾವೆಲ್ಲರೂ ನಿಮ್ಮ ಅಗಾಧ ಮಹಿಮೆಗೆ ತಲೆದೂಗಿ ತಲೆಬಾಗುತ್ತೇವೆ ಹಾಗೂ ನಾವು ಬ್ರಾಹ್ಮಣರಿಂದ ಕಸಿದುಕೊಂಡ ಎಲ್ಲ ಇನಾಮಾದಿಗಳನ್ನು ಮರಳಿ ಅವರಿಗೆ ಕೊಟ್ಟುಬಿಡುತ್ತೇವೆ.

ತಮಗೂ ಕೂಡ, ದಾನಕಾಣಿಕೆಗಳನ್ನೂ ಹೇರಳವಾಗಿ ಸಲ್ಲಿಸುತ್ತೇವೆ

ಶ್ರೀ — (ನಸು ನಕ್ಕು) ಒಳ್ಳೇದು ಶ್ರೀ ಲಕ್ಷ್ಮೀಕಾಂತನು ಎಲ್ಲಕ್ಕೂ ಸಮರ್ಥ ನಿದ್ದಾನೆ ! ಮುಂದೆ ಆ ಕಟ್ಟಿ ಹಾಕಿಸಿದ ಒನಿಕೆಗೆ ದಿನಾಲು ಪಾದೋದಕ ಹಣಿಸಹತ್ತಿದರು ಗುರುಗಳು. ಕೆಲವೇ ದಿನಗಳಲ್ಲಿ ಅಂತಹ ಆ ಉಕ್ಕಿನ ಕಟ್ಟಿನಿಂದ ಭದ್ರವಾದ ಒನಿಕೆಯು, "ನೀನೊಲಿದರೆ ಕೊರಡು ಕೊನರುವದಯ್ಯಾ" ಎಂಬಂತೆ, ಕೊನರಿ ಚಿಗಿಯ ಹತ್ತಿತು. ಅದೊಂದು ಮಾವಿನಮರವೇ ಆಗಹತ್ತಿತು ಈ ವಿಲಕ್ಷಣ ಘಟನೆ ಕಂಡು ದೇಸಾಯರ ಬಾಯಿಯೇ ಹೋದಂತಾಗಿ ಮುಖವೆಲ್ಲ ಹುಚ್ಚೆದ್ದು ಸುರಿಯಹತ್ತಿತು! ಮಾಡಬಾರದ್ದನ್ನು ಮಾಡಿದ್ದಕ್ಕೆ ತುಂಬಾ ವ್ಯಸನಗೊಂಡರು. ಶ್ರೀಗಳ ಅಪಾರ ಮಹಿಮೆಯನ್ನು ಚನ್ನಾಗಿ ಕಂಡುಕೊಂಡಂತಾಯಿತು ಆ ದೇಸಾಯರು! ಬ್ರಾಹ್ಮಣರಿಗೆಲ್ಲ ಮರಳಿ ಆವರವರ ಸ್ವಾಸ್ತ್ಯಗಳನ್ನು ಕೊಟ್ಟರು. ಶ್ರೀಗಳವರನ್ನು ಕ್ಷಮಾಪಣ ಪೂರ್ವಕವಾಗಿ ಸೇವಿಸಿ, ಸೇವೆಸಂಭಾವನೆಗಳನ್ನು ಸಮೃದ್ಧವಾಗಿ ಸಮರ್ಪಿಸುವವರಾದರು ಆ ಶಿರಸಂಗಿ ದೇಸಾಯರು! ಮಹಾತ್ಮರ ಮಹಿಮೆಯು ಅಗಾಧವೂ ಅಚಿಂತ್ಯವೂ ಆಗಿರುವಲ್ಲಿ ಸಂದೇಹವೇನು?

## ೮. ರತ್ನಹಾರವನ್ನು ಅಗ್ನಿಕುಂಡದಲ್ಲಿಟ್ಟು ರಕ್ಷಿಸಿದ.

ಹುತವಹಗುಣಿಸಿದ ರತುನ ಮಾಲಿಕೆಯ ಕ್ಷಿತಿಪಗೆ
ತಂದಿತ್ತತುಳಮಹಿಮನೇ ರಾಘವೇಂದ್ರ ರಾಜಿತ ಗುಣಸಾಂ

—ಜಗನ್ನಾಥದಾಸರು

ರಾಯರ ಅಪಾರ ಮಹಿಮೆಯು ದಿನೇ ದಿನೇ ಹಬ್ಬುತ್ತಾ ವಿಜಾಪುರ ಬಾದಶಹನ ಕಿವಿಯ ವರೆಗೆ ಹೋಯಿತು. ಅದನ್ನು ಕೇಳಿ ಒಳ್ಳೇ ಕುತೂಹಲ ಕೆರಳಿತು ಅವನಲ್ಲಿ ರಾಯರಿಗಾಗಿ ತುಂಬಾ ಶ್ರದ್ಧೆ ಭಕ್ತಿಯುಳ್ಳವನಾಗಿ ಸನ್ನಿಧಾನಕ್ಕೆ ಬಂದ, ಅವರಿಗೆ ಒಂದು ಅಮೌಲ್ಯ ರತ್ನಮಾಲಿಕೆಯನ್ನು ಕಾಣಿಕೆಯಾಗಿ ಅರ್ಪಿಸುವವನಾದನು. ಶ್ರೀಗಳವರೂ ಅದನ್ನು ಸ್ವೀಕರಿಸಿ ಅಗ್ನಿನಾರಾಯಣನಲ್ಲಿ ಹೋಮದ ಅಗ್ನಿಕುಂಡದೊಳಗೆ ಭದ್ರವಾಗಿ ಇರಿಸಿಬಿಟ್ಟರು

'ಸಮಲೋಷ್ಟಾಶ್ಮಕಾಂಚನ'ರಿಗೇನು ರತ್ನವೂ ಅಷ್ಟೇ ಬೆಂಕಿಯೂ ಅಷ್ಟೇ! ಈ ಸುದ್ಧಿಯು ಪುನಃ ಬಾದಶಹನ ವರೆಗೆ ಹೋಯಿತು ಭುವನಪೌಲ್ಯವಾದ ತನ್ನ ರತ್ನಮಾಲಿಕೆಯನ್ನು ಬೆಂಕಿಗೆ ಹಾಕಿ ಸುಟ್ಟು ಹಾಳುಮಾಡಿದರೆಂದು ಕೋಪಾವಿಷ್ಟನಾಗಿ ರಾಯರಿದ್ದಲ್ಲಿಗೆ ಧಾವಿಸಿ ಬಂದನು.

ಬಾದಶಹನು – ಸ್ವಾಮೀ, ನಾನು ನಿಮಗೆ ಹಿಂದೆ ಕೊಟ್ಟಂಥ ಆ ರತ್ನಹಾರವನ್ನಿಷ್ಟು ನನಗೆ ತೋರಿಸೋಣವಾಗಬೇಕು. ಯಾಕಂದರೆ ಅಂಥದನ್ನೇ ಇನ್ನೊಂದು ಮಾಡಿಸಬೇಕಾಗಿದೆ, ನನಗೆ ಈಗ.

ಶ್ರೀಗಳು.– (ನಸುನಕ್ಕು, ಅವನ ಹೃದ್ಗತವನ್ನರಿತವರಾಗಿ) ಹೀಗೋ? ಆಗಬಹುದು! ( ಅಗ್ನಿಯನ್ನು ಪ್ರಾರ್ಥಿಸುವವರಾಗಿ ) ಹಿಂದೆ ಚಲ್ಲಿ ಕೊಟ್ಟ ರಾಜನ ಆ ರತ್ನಕಂಠಿಯನ್ನು ಬೆಂಕಿಯಿಂದ ಹೊರಗೆ ತೆಗೆದು—

ಯಪ್ಪಾ! ಸುಟ್ಟು ಹಾಳಾಗಿಲ್ಲವಲ್ಲವೇ ಅದು! ನಿನಗೇನೋ ಗಾಬರಿಯಾಗಿತ್ತು! ಅಲ್ಲವೇ?

ಬಾದ:– ಇಲ್ಲ ಇಲ್ಲ, ಗುರುಗಳೇ! ದೊಡ್ಡ ಪ್ರಮಾದವಾಯಿತು ನನ್ನದು! ಕ್ಷಮಿಸಬೇಕು. ಅಗಮ್ಯ ಮಹಿಮರು ತಾವು! ಈ ಅಜ್ಞಾನ ಅಪರಾಧವನ್ನು ಹೊಟ್ಟೆಯೊಳಗೆ ಹಾಕಿಕೊಳ್ಳಿರಿ.

## ೯. ನೀರಿನವನಿಗೆ ನಿರ್ವಾಣ ಕೊಡಿಸಿದ್ದು

ಪ್ರಕಟಿಸಿ ತೋರಿದಿ ಮುಕುತಿಯ ಬೇಡಿದ ಭಕುತನ ಯೋಗ್ಯತೆ ।
ನಿಖಿಲ ಜನರಿಗೆ ರಾಘವೇಂದ್ರ ರಾಜಿತ ಗುಣಸಾಂದ್ರಾ ॥

—ಜಗನ್ನಾಥದಾಸರು

ಮೈಸೂರ ರಾಜ್ಯದೊಳಗೆ ಚಿತ್ರಕಲ್‌ದುರ್ಗವೆಂಬ ಊರೊಳಗೆ ವೆಂಕಣ್ಣನೆಂಬ ಒಬ್ಬ ನೀರಿನ ಮಾಣಿ ಇರುತ್ತಿದ್ದನು. ಅವನದು ರಾಯರ ಮೇಲೆ ತುಂಬಾ ಭಕ್ತಿ ವಿಶ್ವಾಸ. ದಿನಾಲು ಒಳ್ಳೇ ಮನಸ್ಸಿನಿಂದ ರಾಯರ ಸೇವೆ ಮಾಡುತ್ತಿದ್ದನು. ಅವನ ಭಕ್ತಿಗೆ ಮೆಚ್ಚಿ ರಾಯರು,

ಶ್ರೀಗಳು:– ವೆಂಕಣ್ಣಾ ನಿನ್ನ ಸೇವೆಗೆ ನಾವು ಮೆಚ್ಚಿರುವೆವು. ನೀನು ಬೇಕಾದ ವರವನ್ನು ಬೇಡಿಕೋ ನಾವದನ್ನು ನೀಡುತ್ತೇವೆ.

ವೆಂಕಣ್ಣ:– ಪ್ರಭುವೇ, ನನಗೆ ಈ ಐಹಿಕಾಭಿಲಾಷೆಗಳಾವುಗಳಲ್ಲಿಯೂ ಇಚ್ಛೆ ಇರುವದಿಲ್ಲ ನನಗೆ ಮೋಕ್ಷವನ್ನು ದಯಪಾಲಿಸಬೇಕು

ಶ್ರೀ· ( ನಕ್ಕು ) ನಿನ್ನಂಥ ನೀರಿನವನಿಗೂ ನಿರ್ವಾಣ ಬೇಕಾಯಿತೆ? ಅದೇನು ಹಣ್ಣುಹಂಪಲ, ಧನ, ಕನಕವೆಂದು ತಿಳಿದಿರುವೆಯೋ ಏನು, ಹುಚ್ಚಪ್ಪಾ! ಮತ್ತೇನನ್ನಾದರೂ ಬೇಡಿಕೋ!

ವೆಂ. ನನಗೆ ಬೇಕಾಗಿರುವದು ಆ ಮುಕ್ತಿಯೇ ಸೈ! ನನ್ನ ಹೆಬ್ಬಯಕೆಯೇ ಅದು! ಕೊಟ್ಟರೆ ಕೊಡಿರಿ, ಬಿಟ್ಟರೆ ಬಿಡಿರಿ! ನನಗೆ ಬೇರಾವುದೂ ಬೇಡ ಭಗವನ್ !

ಶ್ರೀ:- ಒಳ್ಳೇದು! ಕೊಡುತ್ತೇವೆ. ನೀನು ಈ ದೇಹವನ್ನು ಬಿಟ್ಟುಕೊಡಬೇಕು ಹೋಗು. ಚಿತೆಯನ್ನು ರಚಿಸಿ, ಅದರೊಳಗೆ ದೇಹವನ್ನು ವಿಸರ್ಜಿಸು. ಅಂದರೆ ನಿನಗೆ ಮುಕ್ತಿ ಸಿಗುತ್ತದೆ!

ಹೀಗೆ ಗುರ್ವಾಜ್ಞೆಯನ್ನು ಶಿರಸಾವಹಿಸಿ, ವೆಂಕಣ್ಣನು ಚಿತಾರೂಢನಾಗಿ ದೇಹ ಬಿಡಲಿಕ್ಕೆ ಅಣಿಯಾದನು! ಗುರುಗಳು ವೆಂಕಣ್ಣನ ದೃಢಸಂಕಲ್ಪವನು ಕಂಡು ಬೆರಗಾದರು. ಚಿತೆಯು ಪ್ರಜ್ವಲಿಸಿ ಝಗ ಝಗ ಉರಿಯತೊಡಗಿತು. ಮೇಲಿಂದ ವಿಮಾನವೊಂದು ಕೆಳಗಿಳಿದು ವೆಂಕಣ್ಣನನ್ನು ಕೂಡಿಸಿಕೊಂಡು ವೈಕುಂಠಕ್ಕೆ ತೆರಳಿತು. ಎಲ್ಲರೂ ಕಣ್ಣಾರೆ ಕಂಡು [illegible] ಬೆರಗುಗೊಂಡು ಬಾಯಿಯೊಳಗೆ ಬೆರಳು ಹಾಕಿಕೊಂಡರು ಶ್ರೀಗಳು ವಾಯ್ವಂಶಸಂಭೂತರಾಗಿದು ಮೋಕ್ಷಾಧಿಕಾರವನ್ನು ನೀಡುವುದು ಆ ಜನರಿಗೆ ಹೇಗೆ ತಿಳಿಯಬೇಕು! ಜನರ ಚಿತೆಯಲ್ಲಿ ಹುಡುಕಿದಾಗ ಒಂದು ಕೂದಲೂ ಸಿಗದೇ ಹೋಯಿತು! [illegible] ಎಂಬ ಪಯೋಧ್ವಿಷ್ಟ, [illegible] [illegible] [illegible]ಗಳ [illegible] ಪಡುವ[illegible] ಈ [illegible]ವ ಸಂಗತಿ[illegible]

## ೧೦. ಮೃತ್ತಿಕಾ ಮಹಿಮೆ

ವೃಂದಾವನಗತ ಮೃತ್ತಿಗೆ ಜಲಪಾನಾ ಮುಕ್ತಿಗೆ ಸೋಪಾನಾ ।
ಸಂದರ್ಶನ ಮಾತ್ರದಲಿ ಮಹತ್ಪಾಪಾ ಪರಿದೋಡಿಸಲಾಪಾ ।
ಮಂದಭಾಗ್ಯರಿಗೆ ದೊರೆಯದಿವರ ಸೇವಾ ಶರಣರ ಸಂಜೀವಾ ।
ಶ್ರೀ ರಾಘವೇಂದ್ರ ಗುರುರಾಯರ ಸೇವಿಸಿರೋ ಸೌಖ್ಯದಿ
ಜೀವಿಸಿರೋ ॥

ಒಮ್ಮೆ ಒಬ್ಬ ಪರಿಚಾರಕನು ಮದುವೆಮಾಡಿಕೊಳ್ಳಬೇಕೆಂದು ಮನಸ್ಸು ಮಾಡಿಕೊಂಡನು. ಪಾಪ! ಕೈಯಲ್ಲಿ ಬಿಡಿಕಾಸಿಲ್ಲದ ಬಡವನು! ಆದರೂ ರಾಯರಲ್ಲಿ ಬಂದು 'ನನಗೆ ಮದುವೆಯಾಗುವಂತೆ ಅನುಗ್ರಹಿಸಿರೆಂ'ದು ಹೇಳಿಕೊಂಡನು. ರಾಯರು ದಯಾವಶರಾಗಿ, ಪ್ರಸಾದವಾಗಿ ತಮ್ಮ ಮೃತ್ತಿಕೆಯನ್ನು ನೀಡಿ ಆಶೀರ್ವದಿಸಿದರು. ಶ್ರೀ ಗುರುಪ್ರಸಾದವನ್ನು ಶಿರಸ್ಸಿನಲ್ಲಿ ಶಿರಸಾ ಮಾನ್ಯವಾಗಿ ಧರಿಸಿಕೊಂಡನು, ಆ ಬ್ರಾಹ್ಮಣನು.

ಮುಂದೆ ಒಮ್ಮೆ ಪ್ರಯಾಣ ಬೆಳೆಸಿ, ಒಂದು ಗ್ರಾಮದಲ್ಲಿ ಒಬ್ಬ ಬ್ರಾಹ್ಮಣನ ಮನೆಯಲ್ಲಿ ರಾತ್ರಿ ತಂಗುವವನಾದನು. ಆದರೆ ಆ ಕುಟುಂಬಕ್ಕೆ ದಿನಾಲು ರಾತ್ರಿ ಒಂದು ಬ್ರಹ್ಮರಾಕ್ಷಸನ ಪೀಡೆಯಾಗುತ್ತಿತ್ತು. ಅದು ಇವನ ಎಷ್ಟೋ ಮಕ್ಕಳನ್ನು ನುಂಗಿ ನೀರು ಕುಡಿದು ಬಿಟ್ಟಿತ್ತು ಇದು ವರೆಗೆ! ಅಂದೇ ರಾತ್ರಿ ಮನೆಯೊಳಗೆ ಪುತ್ರಜನನವಾಯಿತು. ಆದರೆ ಆ ದುರ್ದೈವೀ ದಂಪತಿಗಳು ದೈನ್ಯದಿಂದ ಹ್ಯಾಗಾದರೂ ಮಾಡಿ ಈ ಒಂದು ಮಗುವನ್ನಾದರೂ ಉಳಿಸಿಕೊಡಿರೆಂದು ಅಂಗಲಾಚಿ ಬೇಡಿಕೊಂಡರು. ಆ ಬ್ರಾಹ್ಮಣನ ಹೃದಯವೂ ಕರಗಿತು!

ಇಷ್ಟರಲ್ಲಿ ಆ ಬ್ರಹ್ಮರಾಕ್ಷಸವು ಹುತ್ ಎಂದು ಮನೆಯನ್ನೇ ಪ್ರವೇಶಿಸಹತ್ತಿತು ಆದರೆ ಹೊಸ್ತಿಲೊಳಗೆ ಕಾಲಿಡಲು ಅದಕ್ಕೆ ಎದೆಯೇ ಆಗಲಿಲ್ಲ. ಅಲ್ಲಿಯೇ ಶ್ರೀ ರಾಯರ ಸಂನಿಧಾನದಿಂದ ಆ ಬ್ರಾಹ್ಮಣನಲ್ಲಿದ್ದ ಮೃತ್ತಿಕೆಯು ನಿಗಿ ನಿಗಿ ಕಿಚ್ಚಾಗಿ ಆ ರಾಕ್ಷಸನ ಎದೆಯನ್ನೇ ಸೀಳಿಬಿಟ್ಟಿತು!

ಬ್ರ. ರಾಕ್ಷಸ– ಎಲವೋ, ನಿನ್ನಾ ತಲೆದಿಂಬಿನಲ್ಲಿರಿಸಿದ ಕಿಚ್ಚನ್ನಿಷ್ಟು ಅತ್ತ ದೂರ ಬಿಸುಡು. ನಾನು ಉಳಿಯಲಾರೆನು. ಆದನ್ನು ನಾನು

ಸಹಿಸಲಾರೆನು ನಿನಗೆ ನಾನು ಬೇಕಾದ್ದನ್ನು ನೀಡುವೆ! ಮಹಾ
ರಾಯಾ ನನ್ನ ಮೇಲಿಷ್ಟು ಉಪಕಾರ ಮಾಡು!

ಬ್ರಾಹ್ಮಣ – ಓಹೋ ಆ ರಾಯರ ವೃತ್ತಿಕೆಗೆ ನೀನು ಹೀಗೆ ಬೆಚ್ಚಿ ಬವಣೆ
ಬಡುತ್ತಿರುವೆಯಲ್ಲವೇ!

ಹೀಗೆ, ಆ ಬ್ರಹ್ಮರಾಕ್ಷಸನು ಎಲ್ಲಿಂದಲೋ ಒಂದು ಚಿನ್ನದ ಕೊಡವನ್ನೇ ತಂದಿರಿಸಿ ಆ ಬ್ರಾಹ್ಮಣನನ್ನು ಸೆರಗೊಡ್ಡಿ ಬೇಡಿಕೊಳ್ಳುತ್ತಿತ್ತು, ಪುನಃ ಮೊದಲಿನಂತೆ.

ಆ ಕೊಡವನ್ನು ಆಚೆಗೆ ಇರಿಸಿಕೊಂಡು, ಆ ಬ್ರಾಹ್ಮಣನು ಆ ವೃತ್ತಿಕೆಯ ಒಂದು ತುಣುಕನ್ನು ಆ ರಾಕ್ಷಸನ ಮೇಲೆ ಎಸೆದುಬಿಟ್ಟನು! ಕೂಡಲೇ ಆ ಮಹಾನುಭಾವರ ವೃತ್ತಿಕಾ ಮಹಿಮೆಯಿಂದ, ಆ ಬ್ರಹ್ಮರಾಕ್ಷಸನ ದೇಹಾಂತವಾಗಿ ದಿವ್ಯಲೋಕ ಪ್ರಾಪ್ತಿಯಾಯಿತು ಅವನಿಗೆ !

ಮುಂದೆ ಆ ಮನೆಯ ಗೃಹಸ್ಥನು ತನ್ನ ಉಪವರಳಾದ ಕನ್ಯೆಯನ್ನುಅದೇ ಬ್ರಾಹ್ಮಣ ವರನಿಗೆ ಕೊಟ್ಟು ಮದುವೆ ಮಾಡುವವನಾದನು ಭೂತ ಪ್ರೇತ ಪಿಶಾಚಾದಿ ಪೀಡಾದಿಗಳನ್ನೆಲ್ಲ ಪರಿಹರಿಸುವ ಆ ಮಹಾಮಹಿಮೆಯನ್ನು ಎಷ್ಟು ವರ್ಣಿಸಿದರೂ ಕಡಿಮೆಯೇ!

## ೧೧. ರಾಯರ ಪೂಜಾರ ಮನೆತನ

ಒಮ್ಮೆ ಉತ್ತರ ದೇಶದಿಂದ ಮೂವರು ಬ್ರಾಹ್ಮಣರು ರಾಯರ ದರ್ಶನಕ್ಕೆ ಮಂತ್ರಾಲಯಕ್ಕೆ ಬರುವವರಾದರು. ಅವರಿಗೆ ಅನುಕ್ರಮವಾಗಿ ಮೀರು, ವಸ್ತ್ರ, ಪಾತ್ರೆ ಕಂಗಡಬು ಇವುಗಳ ಮೇಲೆ ತುಂಬಾ ಮನೋವಾಂಛೆ ಇತ್ತು. ಇವರು ತುಂಗಭದ್ರೆಯೊಳಗೆ ಮಿಂದು ಹೊರಗೆ ಬರುವಾಗ್ಗೆ, ಅವರು ಬಯಸಿದ ಪದಾರ್ಥಗಳು ರಾಯರಿಗೆ ತಿಳಿಯಲೋ ಎಂಬಂತೆ, ಸಿದ್ಧವಾಗಿಯೇ ಇದ್ದವು

ಶಿಷ್ಯನು. (ಶ್ರೀಗಳ ಬೃಂದಾವನವನ್ನು ತೋರಿಸಿ ಬಗೆಯುತ್ತ) ಆಚಾರ್ಯರೇ,
ನಮಗಾಗಿ ಮೀರು, ವಸ್ತ್ರ, ಪಾತ್ರೆ ಕಂಗಡಬುಗಳನ್ನೇ ತೂಗ

ಸಾಗಿ ಸಿದ್ಧಮಾಡಿಸಿ ಇಟ್ಟಿದ್ದಾರೆ ಶ್ರೀಗಳು. ದಯಮಾಡಿಸಬೇಕು ಬೇಗ ಭೋಜನಕ್ಕೆ!

ಆಚಾರ್ಯರು – ಮೂವರೂ, (ಒಳ್ಳೇ ಚಕಿತರಾಗಿ) ಇದೇನು ಅಪೂರ್ವ ಚಮತ್ಕಾರ! ನಮ್ಮ ಮನೋಬಯಕೆಯನ್ನು ಈ ಶ್ರೀಗಳ ಶಿಷ್ಯನು ಶ್ರೀಗಳ ಶಾಟಿಯ ಪ್ರಭಾವದಿಂದ ಅರಿಯಬಲ್ಲ ನಾದ ಮೇಲೆ, ಆ ಮಹಾನುಭಾವರ ಅಗಾಧ ಮಹಿಮೆ ಅಪರೋಕ್ಷ ಜ್ಞಾನಗಳೆಷ್ಟು ಅಗಮ್ಯವಾಗಿರಬೇಕು?

ತೀರ್ಥ ಗಂಧಾಕ್ಷತೆ ಆದ ನಂತರ,

ಶ್ರೀಗಳು – ನೀವು ಇನ್ನು ಜನ್ಮಜನ್ಮಾಂತರದಲ್ಲೂ ಸದ್ವಿಪ್ರರಾಗಿ ಜನಿಸಿ, ನಮ್ಮನ್ನು ನಿತ್ಯ ಪೂಜಿಸುತ್ತ, ಸೇವಿಸುತ್ತ, ನಿಮ್ಮ ಬಯಕೆಯ ಭಕ್ಷ್ಯಭೋಜ್ಯಗಳನ್ನು ಸವಿಯುತ್ತ ಹೋಗಿರಿ! ನೀವು ನಮಗಿನ್ನು ಮೇಲೆ ಪೂಜಾರಿಗಳು!

ಇಂದಿಗೂ ಕೂಡ ಇದೇ ಮನೆತನದವರೇ ಮಂತ್ರಾಲಯದಲ್ಲಿ ಶ್ರೀ ರಾಯರ ಪೂಜಾರಿಗಳಾಗಿರುತ್ತಾರೆ. ಬೇಡಿ ಬಯಸಿದ ಭಾಗ್ಯವನ್ನೇ ನೀಡುವ ಭಾಗ್ಯಪ್ರದಾತರಲ್ಲವೇ? ಜಯತು ಜಯತು ಭೋಗೀ ಭಕ್ತ ಭಾಗ್ಯ ಪ್ರದಾತಾ!

## ೧೨. ( ಜ್ಯೋತಿಷ್ಯತ್ರಯರು )

ಒಮ್ಮೆ ಮೂವರು ಜ್ಯೋತಿಷಿಗಳು ರಾಯರಲ್ಲಿಗೆ ಬಂದರು.

ಶ್ರೀ – ಜೋತಿರ್ಮಾರ್ತಾಂಡರೆ, ನೀವು ನಮ್ಮ ಜಾತಕವನ್ನು ಪ್ರತ್ಯೇಕವಾಗಿ ಬರೆದು ತನ್ನಿರಿ ನೋಡುವಾ !

( ಮೂರೂ ಜಾತಕಗಳನ್ನು ನೋಡಿ )

ಶ್ರೀಗಳು ನಸುನಕ್ಕು ನಿಮ್ಮೆಲ್ಲರ ಜಾತಕಗಳು ತೀರ ಭಿನ್ನವಾಗಿವೆ !

೧. ಆಯುರ್ಮಾನ, ೧೦೦ ವ.

೨. ,, ೩೦೦ ,,

೩. ,, ೭೦೦ ,, .ಷ!

ಎಲ್ಲರಿಗೂ ಯಥಾಯೋಗ್ಯ ಸಂಭಾವನೆ ಸಲ್ಲಿಸಿ ಬೀಳ್ಕೊಡುವವರಾದರು ಗುರುಗಳು. ಆದರೆ ಅಲ್ಲಿಯ ಜನರಿಗೆ ಮಾತ್ರ, ವಿಲಕ್ಷಣ ವಿಚಿತ್ರ ಭವಿಷ್ಯವನ್ನು ನೋಡಿ, ತುಂಬಾ ಸೋಜಿಗ ಉಂಟಾಯಿತು ! ಆದರೆ ಗುರುಗಳು ಹೀಗೆ ಅವರ ಶಂಕಾನಿರಸನ ಮಾಡುವವರಾದರು.

ಶ್ರೀ:— " ಆಯುರಬ್ದಶತಂ ಯತ್ತು ಶರೀರಸ್ಯ ವಿವಕ್ಷಯಾ " ನನ್ನ ಈ ಶರೀರದ ಆಯುರ್ಮಾನವು ೧೦೦ ವರ್ಷ " ಅಬ್ದಶತತ್ರಯಂ ಮೇ ಟಿಪ್ಪಣಾನಾಂ ವಿವಕ್ಷಯಾ" ೩೦೦ ವರ್ಷಗಳ ಕಾಲಮಿತಿಯು ನಮ್ಮ ಟೀಕೆಟಿಪ್ಪಣಿಗಳಿಗೆ ಅನ್ವಯಿಸುತ್ತದೆ " ಅಬ್ದಸಪ್ತಶತಂ ತಚ್ಚ ವೃಂದಾವನ ವಿವಕ್ಷಯಾ" ಹಾಗೆಯೇ ನಮ್ಮ ವೃಂದಾವನ ಸ್ಥಿತಿಯ ಭಾವವನ್ನೂ ಆ ೩೦೦ ವರ್ಷಗಳು ಸೂಚಿಸುತ್ತವೆ.

" ಮಮ ವೃಂದಾವನೇ ವಾಸೇ ವರ್ಷಸಪ್ತಶತಾವಧಿಃ "

ನಮ್ಮ ಸನ್ನಿಧಾನವು ಈ ವೃಂದಾವನದಲ್ಲಿರುವ ೭೦೦ ವರ್ಷ ನಮ್ಮ ಆಯುಃಪರಿಮಿತಿ ೧೦೦ ವರ್ಷ, ನಮ್ಮ ಗ್ರಂಥಾದಿಗಳ ಆಯುಃಪರಿಮಿತಿಯು ೩೦೦ ವರ್ಷ. ಮತ್ತು ನಮ್ಮ ವೃಂದಾವನದ ಮಹಾತ್ಮೆಯು ೭೦೦ ವರ್ಷ ಕಾಲ ಅವಿಚ್ಛಿನ್ನವಾಗಿ ನಡೆಯುವದು. ಈ ಮೂವರ ಜಾತಕಗಳಲ್ಲೂ ಸಂಪೂರ್ಣ ಸ್ವಾರಸ್ಯವಿದೆ.

## ೧೩. ಹರಿಜನೋದ್ಧಾರ

ಒಮ್ಮೆ ಶ್ರೀಗಳವರಿಗೆ ಶ್ರೀ ತಿರುಪತಿಯ ತಿಮ್ಮಪ್ಪನ ದರ್ಶನ ಮಾಡಿಕೊಳ್ಳಬೇಕೆಂಬ ಆಶೆಯಾಯಿತು. ಸಂಚಾರ ಕ್ರಮವಾಗಿ ಹಾದಿಯಲ್ಲಿ ಒಂದು ಪುರಾತನ ಮಾರುತೀ ಗುಡಿಯಲ್ಲಿ ತಂಗಬೇಕಾಯಿತು. ಅದು ನಿಜಾಮ ಇಲಾಖೆಯ ರಾಯಚೂರ ಜಿಲ್ಲೆಯ ಮಾನವೀ ಗ್ರಾಮಕ್ಕೆ ಎಂಟು ಮೈಲು ದೂರವಿದೆ. ಆಗ ಚಾತುರ್ಮಾಸ್ಯ ಕಾಲವಾಗಿತ್ತು ಒಬ್ಬ ಹರಿಜನ ಭಕ್ತನು ತಲೆಯ ಮೇಲೆ ಒಂದು ಕಟ್ಟಿಗೆ ಹೊರೆಯನ್ನು ತರುತ್ತಿದ್ದಾಗ್ಗೆ ಪಾಲಕಿಯಲ್ಲಿ ಬರುತ್ತಿದ್ದ ಗುರುಗಳನ್ನು ಕಂಡು, ತಾನು ತಂದ ಹೊರೆಯನ್ನು ಅವರು ತಂಗಿದ ಸ್ಥಳದಲ್ಲಿಳಿಸಿ, ಕೈಜೋಡಿಸಿ ನಿಂತುಬಿಟ್ಟನು.

ಶ್ರೀಗಳು – (ಅಪರೋಕ್ಷ ಜ್ಞಾನದಿಂದ ಗುರ್ತಿಸಿ ನೋಡಿ) ಓಹೋ! ಕನಕಾ ನಿನ್ನ ಗತಿ ಹೀಗಾಯಿತೇ!

ಕನಕಾ – ಏನು ಹೇಳಲಿ, ಸನ್ನೊಡೆಯಾ, ಈ ನನ್ನ ದುರ್ಭಾಗ್ಯದ ಬಾಳನ್ನು ಸಾಕು ಮಾಡು ಸ್ವಾಮೀ!

ಶ್ರೀ – ಒಳ್ಳೇದು ಆಗಬಹುದು ನಮ್ಮ ಶ್ರೀ ಮೂಲರಾಮನಿಗೆ ನಿನ್ನ ಸೇವೆ ಸಲ್ಲಿಸಿಬಿಡು ಆಂದರೆ ಎಲ್ಲಾ ಸಾಧ್ಯ!

ಕ –– ನನ್ನಂಥ ಗತಿ ಇಲ್ಲದವನು ಅದು ಹೇಗೆ, ಬುದ್ಧಿ, ಸೇವೆ ಸಲ್ಲಿಸಲು ಸಾಧ್ಯ!

ಶ್ರೀ – ಅದೇನಿಲ್ಲ ಯಥಾಶಕ್ತಿ ಕೈಲಾದಷ್ಟು ಏನಾದರೂ ಸೇವೆ ನೀಡಬೇಕಷ್ಟೇ ಕನಕಾ! ಇದ್ದಷ್ಟರೊಳಗೇನೇ ಏನಾದರೂ ಶ್ರೀ ಕೃಷ್ಣಾರ್ಪಣ ಹೇಳಬೇಕು. ಇಲ್ಲವೆನ್ನಬಾರದು ಸರ್ವಥಾ, ಇಲ್ಲವೆಂದರೆ ಇದ್ದದ್ದೂ ಕೂಡ ಇಲ್ಲವಾಗಿ ಬಿಡುತ್ತೆ.

ಹಿಂದಿನ ಜನ್ಮದಲ್ಲಿಯ ಶ್ರೀ ಕನಕದಾಸರು ಸ್ವೇಚ್ಛೆಯಿಂದ ಹರಿಜನರೊಳಗೆ ಹರಿಜನೋದ್ಧಾರಕ್ಕಾಗಿ ಹುಟ್ಟಿ ಬಂದಿದ್ದನೆಂದು ಹೇಳುತ್ತಾರೆ ಬಲ್ಲವರು.

ನಿರ್ವಾಹವಿಲ್ಲದೇ ಆ ಹರಿಜನ ಕರಣನು, ಇದ್ದದ್ದರಲ್ಲಿಯೇ ಅನುಕೂಲ ಮಾಡಿಕೊಂಡು, ಶ್ರೀ ಮೂಲರಾಮನಿಗೆ ಒಂದು ಪಟ ಸಾಸುವೆಯನ್ನು ಭಯ ಭಕ್ತಿಯಿಂದ ತಂದು ಸುರುವುವವನಾದನು ಶ್ರೀಗಳ ಮುಂದೆ ಆ ಕನಕನ ಕಾಣಿಕೆಯನ್ನು ಒಳಗೆ ಒಯ್ದು ಅದನ್ನೇ ನೈವೇದ್ಯಕ್ಕೆ ಪಾಕಶಾಕಗಳಿಗೆ ಬಳಸಿರೆಂದು ಆಜ್ಞಾಪಿಸುವವರಾದರು

ಶಿಷ್ಯರು –– ಬುದ್ಧೀ ಈಗ ವ್ರತಕಾಲ ಸಾಸುವೆ ನಿಷಿದ್ಧ. ಅದನ್ನೇನು ಮಾಡಬೇಕು?

ಶ್ರೀ –– ನಿಜ ಆದರೂ, ಇನ್ನು ಮೇಲೆ ಈ ಭಕ್ತ ಶಿರೋಮಣಿಯ ಸವಿ ನೆನಪಿಗೆಂದು, ಈ ಸಾಸುವೆಯನ್ನು ಉಪಯೋಗಿಸುವ ಸಾಂಪ್ರದಾಯ ಬೀಳಲಿ ನಮ್ಮ ಮಠದಲ್ಲಿ!

ಶಿ:–– ಅವನಾರು ಸ್ವಾಮೀ?

ಶ್ರೀ — ಒಂದಿನ ಜನ್ಮದಲ್ಲಿ ನಾವು ಶ್ರೀ ವ್ಯಾಸತೀರ್ಥರಾಗಿದ್ದಾಗ್ಗೆ ಈತನು ಕನಕನಾಗಿದ್ದನು ಶ್ರೀ ಉಡುಪಿಯ ಶ್ರೀ ಕೃಷ್ಣನ ಮುಖವನ್ನೇ ತಿರುಗಿಸಿಕೊಂಡ ಮಹಾಭಾಗವತನಾದ ಕನಕನು ಇವನು

ನಂತರ ಆ ಹರಿಜನನು ಮುಂದುಕೂಡಿಯಾಗಿ ಹೊರಗೆ ಕಾಯುತ್ತ ಕುಳಿತುಕೊಂಡನು ಶ್ರೀ ರಾಯರು, ಆ ಹರಿಜನನಿದ್ದಲ್ಲಿಗೇ ಹೋಗಿ, ಅವನಿಗೆ ತೀರ್ಥ ಪ್ರಸಾದ ಕೊಡುವವರಾದರು ! ಆ ಹರಿಜನ ಭಕ್ತನು ಶ್ರೀ ಗುರುದರ್ಶನ ಪ್ರಸಾದಗಳಿಂದ ಒಳಹೊರಗೆಲ್ಲ ಪಾವನನಾದನು 'ಆಮೇಲೆ ಶ್ರೀ ಗುರ್ವಾಜ್ಞಾನುಸಾರವಾಗಿ, ಆ ಭಕ್ತನು ಆ ಹರಿಜನ ದೇಹವನ್ನು ಬಿಟ್ಟು ಕೊಟ್ಟು, ತನ್ನ ಇಹಲೋಕಯಾತ್ರೆ ಮುಗಿಸುವವನಾದನು. ಎಲ್ಲರೂ " ಧನ್ಯ ಧನ್ಯ" ವೆಂಬ ಧನ್ಯೋದ್ಗಾರ ತೆಗೆಯುವವರಾದರು ! ನಂತರ ಗಳು ಆ ಮಾರುತೀ ದೇವಸ್ಥಾನದ ಎದುರಿನಲ್ಲಿಯೆ ಆ ಭಕ್ತನ ದೇಹವನ್ನು ಭೂಸ್ಥಾಪನೆ ಮಾಡಿಸುವ 'ಾದರು ಅದಕ್ಕೆ "ಕನಕ ಮೋಕ್ಷ ಕಂಡ ತಾಣ" ( ಸ್ಥಾನ ) ವೆಂದು ಶಾಸನ ಕೆತ್ತಿಸಿ ಇಡುವವರಾದರು ! ಶ್ರೀ ಗುರುಹಿರಿಯರ ಹಿರಿಮೆಯ ಆಳವನ್ನು ಯಾರು ಅಳೆಯಬಹುದು !

## ೧೪. ಮನ್ರೋಸಾಹೆಬ

ಶ್ರೀ ರಾಯರು ವೃಂದಾವನಸ್ಥರಾಗಿ ೧೪೦ ವರ್ಷಗಳು ಕಳೆದವು ಮುಂದೆ ಕ್ರಿ. ಶ. ೧೮೧೧ರಲ್ಲಿ ಹಿಂದುಸ್ತಾನವೆಲ್ಲ ಬ್ರಿಟಿಶ್ ಆಳರಸರ ಕೈಸೇರಿತು ಹಳೆಯ ಇನಾಮು, ಜಹಾಗೀರು, ಉಂಬಳಿಗಳ ಪರಿಶೀಲನೆ ನಡೆಯಿತು ಈ ಮಂತ್ರಾಲಯದ ಇನಾಮುಗಳ ಚೌಕಸಿಗಾಗಿ ಸರ್ ಥಾಮಸ್ ಮನ್ರೋ ಎಂಬಾತನನ್ನು ಸರ್ಕಾರದವರು ನೇಮಿಸಿಕೊಂಡರು. ಅವನು ಮಂತ್ರಾಲಯಕ್ಕೆ ಬಂದು ಅಲ್ಲಿ,

ಮನ್ರೋ.- ನಿಮ್ಮೆಲ್ಲರ ಹಿರಿಯತನದ ಮಾತಿನಮೇಲಿಂದ ನಾನೇನು ಈ ನಿಮ್ಮ ಇನಾಮಾದಿಗಳನ್ನಿರಗೊಡಲಾರೆನು ಏನಾದರೂ ನಿಮ್ಮ ಮಹಾತ್ಮರ ಮಹಿಮಾವಿಶೇಷಗಳ ನಿದರ್ಶನಗಳಾದರೆ ನೋಡೋಣವಂತೆ !

ಮಾಗರ್ಷನ್ರತಿಪತ್ತಿಯಲ್ಲಿ ನಮ್ಮ ರಾಯರದು ಎತ್ತಿದ ಕೈ ಭಾಷೆಯ ಮೇಲೆ ಮಿಗಿಲಾದ ಪ್ರಭುತ್ವ ಇವರದು ಭಾಷೆಯು ಅಸ್ಖಲಿತವಾಗಿ ಪ್ರವಹಿಸುವಂತಹದು, ಗಂಗಾಪ್ರವಾಹದಂತೆ ಶಬ್ದ ಸೌಂದರ್ಯದ ಸುವರ್ಣಕ್ಕೆ ಅರ್ಥ ಪರಿಮಳದ ಕುಂದಣದ ಶೋಭೆ ಇವರ ವಾಙ್ಮಯದಲ್ಲಿದೆ ಇವರಲ್ಲಿ ಅಯುಕ್ತ ವಿಚಾರ ಹಾಗು ಅಪ್ರಶಸ್ತ ಅರ್ಥ ಇವುಗಳಿಗೆ ಅವಕಾಶವೇ ಇಲ್ಲ ಅವಿಚಾರವೆಂಬುದು ಇವರಲ್ಲಿ ಹುಡುಕಿದರೂ ಸಿಗಲಾರದು ಸಂದೇಹಗ್ರಸ್ತರಾಗಿ, ಹಿಂದೆ ಮುಂದೆ ಹೊಯ್ದಾಡುತ್ತ, ಕೋಲಿ ಹೊಡೆಯುತ್ತ ವಾದಿಸುವದು ಇವರ ಸ್ವಭಾವವೇ ಅಲ್ಲ ತಿದ್ದುವ ಹಾಗೆ ಬರೆಯುವವರಲ್ಲ, ಹೇಳಿದ್ದನ್ನಾಗಲಿ, ಒಮ್ಮೆ ಬರೆದದ್ದನ್ನಾಗಲೀ ಪುನಃ ಹೇಳುವವರಲ್ಲ, ಬರದದ್ದನ್ನು ತಿದ್ದಿ, ಅರಿಸ ಇವರಿಗೆ ಗೊತ್ತೇ ಇಲ್ಲ. ಒಳ್ಳೇ ವಾದೀಭಸಿಂಹರೇ ಇವರು

## ಇವರ ಗ್ರಂಥ ರತ್ನಗಳು

(೧) ತತ್ತ್ವೋದ್ಯೋತ (೨) ಪ್ರಮಾಣ ಪದ್ಧತಿ (೩) ಗೀತಾವಿವೃತಿ (೪) ತಂತ್ರ ದೀಪಿಕೆ (೫) ಪ್ರಮೇಯ ದೀಪಿಕೆ (೬) ನ್ಯಾಯ ದೀಪಿಕೆ (೭) ಋಗರ್ಥಮಂಜರಿ (೮) ಭಾಟ್ಟ ಮೀಮಾಂಸೆ (೯) ಮಂತ್ರಾರ್ಥಸಂಗ್ರಹ (೧೦) ಕೃಷ್ಣಮಂಜರಿ (೧೧) ರಾಮಮಂಜರಿ (೧೨) ಗೀತಾರ್ಥ ಮಂಜರಿ (೧೩) ಋಗ್ಭಾಷ್ಯ (೧೪) ಪುರುಷಸೂಕ್ತಾರ್ಥ (೧೫) ಯಜುರ್ವೇದ ಟಿಪ್ಪಣಿ (೧೬) ಸಾಮವೇದ ಟಿಪ್ಪಣಿ (೧೭) ಸುಧಾವ್ಯಾಖ್ಯಾನ (೧೮) ಸ್ಮೃತಿ ಸಂಕಲ್ಪಗದ್ಯ (೧೯) ಅಂಭೃಣೀಸೂಕ್ತಭಾಷ್ಯ (೨೦) ತತ್ತ್ವ ವಿವೇಕ ಟಿಪ್ಪಣಿ (೨೧) ತತ್ತ್ವ ಸಂಖ್ಯಾನ ಟಿಪ್ಪಣಿ (೨೨) ವಿಷ್ಣು ತತ್ತ್ವ ನಿರ್ಣಯ (೨೩) ಕಥಾ ಲಕ್ಷಣ ಟಿಪ್ಪಣಿ (೨೪) ಪ್ರಮಾಣ ಲಕ್ಷಣ ಟಿಪ್ಪಣಿ (೨೫) ಕರ್ಮ ನಿರ್ಣಯ ಟಿಪ್ಪಣಿ (೨೬) ತತ್ತ್ವ ಪ್ರಕಾಶಿಕಾ ಟಿಪ್ಪಣಿ (೨೭) ವಾದಾವಲಿ ಟಿಪ್ಪಣಿ (೨೮) ಉಪಾಧಿ ಖಂಡನ ಟಿಪ್ಪಣಿ (೨೯) ಮಾಯಾವಾದಖಂಡ ಟಿಪ್ಪಣಿ (೩೦) ಮಿಥ್ಯಾತ್ವಾನುಮಾನ ಖಂಡನ ಟಿಪ್ಪಣಿ (೩೧) ದಶೋಪನಿಷತ್ ಖಂಡಾರ್ಥ (೩೨) ತರ್ಕತಾಂಡವ ಟಿಪ್ಪಣಿ (೩೩) ಚಂದ್ರಿಕಾ ಟಿಪ್ಪಣಿ (೩೪) ಅಣುಭಾಷ್ಯಟೀಕಾ

(೩೫) ನ್ಯಾಯ ಮುಕ್ತಾವಲಿ (೩೬) ಈಶಾವಾಸ್ಯೋಪನಿಷ ಟಿಪ್ಪಣಿ (೩೭) ಅಥರ್ವಣೋಪನಿಷತ್ ಟಿಪ್ಪಣಿ

ಶ್ರೀಮದಾಚಾರ್ಯರು ಮೂಲ ಮೂವತ್ತೇಳು ಗ್ರಂಥ ಬರೆದಂತೆ, ಇವರೂ ಪಂಡಿತ ಪಾಮರರ ಉಪಕಾರೋದ್ಧಾರಾರ್ಥವಾಗಿ, ೩೭ ಗ್ರಂಥಗಳನ್ನು ಬರೆದಿದ್ದಾರೆ ಇವರ ಗ್ರಂಥಮಹತಿಯನ್ನು ದೇಶೀಯರು ಕೊಂಡಾಡುತ್ತಿರುವದಲ್ಲದೆ, ಅನ್ಯಮತೀಯ ವಿದೇಶೀಯರೂ ಕೂಡ, ಕೊಂಡಾಡಿ ಶ್ಲಾಘಿಸುತ್ತಿರುವರು ಇನ್ನೂ!

ಗೀತಾವಿವೃತಿಯಂತೂ, ಶ್ರೀಮದ್ಭಗವದ್ಗೀತೆಯ ಯಥಾರ್ಥ ಜ್ಞಾನಕ್ಕೆ ಒಳ್ಳೇ ಸಹಾಯಕ ಸಾಧನವಾಗಿದೆ

ಲೋಕಮಾನ್ಯ ಟಿಳಕರ ತಂದೆಯು ತಮ್ಮ ಕೊನೆಯ ದಿನಗಳಲ್ಲಿ ಇವರ ಗೀತಾವಿವೃತಿಯನ್ನಿಷ್ಟು ಓದಿ ಕೇಳಿಸೆಂದು ಹೇಳಿದರು. ಅದನ್ನೇ ಲೋಕಮಾನ್ಯರು ಓದಿ ತೋರಿಸಿದರು, ತಮ್ಮ ತಂದೆಗಾಗಿ. ಮುಂದೆ ಶ್ರೀಮದ್ಭಗವದ್ಗೀತೆ ಹಾಗೂ ಗೀತಾವಿವೃತಿಗಳ ವಿಷಯವಾಗಿ ಟಿಳಕರ ಬುದ್ಧಿ ಕೆರಳಿತು. ಅವರೂ ಗೀತಾವಿವೃತಿಯನ್ನು ಓದಿ ಇದೇ ಗೀತಾವಿವೃತಿಯಿಂದಲೇ ಒಳ್ಳೇ ಸ್ಫೂರ್ತಿಯುಂಟಾಗಿ, " ಕರ್ಮಯೋಗರಹಸ್ಯ " ಎಂಬ ಮರಾಠಿ ಗೀತಾವಿವೇಚಕ ಗ್ರಂಥವನ್ನು ಬರೆದು ನಮ್ಮ ನಿಮ್ಮೆಲ್ಲರ ಮೇಲೂ ಒಳ್ಳೇ ಉಪಕಾರಮಾಡಿ ಒಳ್ಳೇ ಬೆಳಕನ್ನೇ ಬೀರಿದ್ದಾರೆ!

---



# ಶ್ರೀ ಗುರು ರಾಘವೇಂದ್ರ ಸ್ತೋತ್ರವು

ಈ ಸ್ತೋತ್ರವನ್ನು ರಚಿಸಿದವರು ಅಪ್ಪಣ್ಣಾಚಾರ್ಯರು. ರಾಯರ ಸಮಕಾಲೀನರು, ಅವರ ಶಿಷ್ಯ ಶ್ರೇಷ್ಠರು, ವಿದ್ವಾಂಸರು, ಅಪರೋಕ್ಷ ಜ್ಞಾನಿಗಳು. ಇವರು ತಮ್ಮೂರಿಗೆ ಹೋಗಿದ್ದರು. ಶ್ರೀಗಳು ಸದೇಹವಾಗಿ ವೃಂದಾವನ ಪ್ರವೇಶಿಸಿದರು. ಈ ಸಂಗತಿಯನ್ನು ಕೇಳಿದ ಅಪ್ಪಣ್ಣಾಚಾರ್ಯರಿಗೆ ದುಃಖದಿಂದ ಹೃದಯವು ತುಂಬಿಬಂದಿತು. ಶ್ರೀ ಗುರುಗಳಿಗಾಗಿ ಅವರ ಅಮೋಘ ಭಕ್ತಿಯು ಹೆಚ್ಚಿ ಉಕ್ಕೇರಿ ಹೊಳೆಯಾಗಿ ಹರಿಯಿತು, ಅವರ ಈ ಸ್ತೋತ್ರರೂಪದಿಂದ. ಅವರ ವಾಣಿಯು ಅವರ ಹೃದಯದ ವೀಣೆಯನ್ನೇ ಮಿಡಿದು ನುಡಿಸಿದಂತಿದೆ ಈ ಸ್ತೋತ್ರದಲ್ಲಿ ಅವರ ಭಕ್ತಿಯು ಅವರ ಪಾಂಡಿತ್ಯದಲ್ಲಿ ಬೆರೆತು, ಹೊರ ಹೊಮ್ಮಿದಂತಿದೆ ಇದರಲ್ಲಿ. ಭಕ್ತಿಪರವಶರಾಗಿ ಸ್ತೋತ್ರ ಮಾಡುತ್ತ ಮಾಡುತ್ತ, ಕೊನೆಯ ನುಡಿಯನ್ನು "ಕೀರ್ತಿರ್ದಿಗ್ವಿದಿತಾ ವಿಭೂತಿರತುಲಾ" ಈ ವರೆಗೆ ನುಡಿಯಲು, ಒಳವೃಂದಾವನದಿಂದ "ಸಾಕ್ಷೀಹಯಾಸ್ತ್ಯೋಽತ್ರ ಹಿ" ಎಂಬ ಛಂದೋಬದ್ಧವಾದ ಹಾಗೂ ಪೂರ್ಣಗೊಳಿಸುವ ನುಡಿಯು ಕೇಳಿಸಿತು. ಅಪ್ಪಣ್ಣಾಚಾರ್ಯರು ಆ ದಿವ್ಯ ವಾಣಿಯೇ ಗುರುವಾಜ್ಞೆ ಎಂದು ನಂಬಿ ಅವರ ಮಹಿಮೆಯನ್ನು ಕೊಂಡಾಡಹತ್ತಿದರು. ತಾವು ಮಾಡಿದ ಸ್ತೋತ್ರಕ್ಕೂ ಅದರ ಫಲಶ್ರುತಿಗೂ ಶ್ರೀ ಗುರುಗಳು ಸಾಕ್ಷಿಯಾಗಿ ನಿಂತುಕೊಂಡು, ಅನುಗ್ರಹಿಸುವದರಲ್ಲಿ ಸಂದೇಹವಿಲ್ಲವೆಂದು ದೃಢವಾಗಿ ನಂಬಿದರು.

ಶ್ರೀಪೂರ್ಣ ಬೋಧಗುರುತೀರ್ಥಪಯೋಧಿಪಾರಾ ಕಾಮಾರಿಮಾಕ್ಷ
ವಿಷಮಾಕ್ಷಶಿರಸ್ಪೃಶಂತೀ ।
ಪೂರ್ವೋತ್ತರಾಮಿತತರಂಗಚರತ್ಸು ಹಂಸಾ ದೇವಾಲಿಸೇವಿತ
ಪರಾಂಘ್ರಿ ಪಯೋಜಲಗ್ನಾ ॥ ೧ ॥

ಶ್ರೀ ಗುರುಗಳ ವಿಮಲ ವಚನವು ನಮ್ಮನ್ನೆಲ್ಲ ಪಾವನಗೊಳಿಸಿ ಅವರ ದಿವ್ಯವಾಣಿಯು ನಮ್ಮೆಲ್ಲರಲ್ಲಿ ನೆಲಿಸಿ, ಭಕ್ತರನ್ನೆಲ್ಲ ಆಶೀರ್ವದಿಸಿ, ಉದ್ಧರಿಸಿ ಅನುಗ್ರಹಿಸಲೆಂದು ಕೋರಿದ್ದಾರೆ, ಆಚಾರ್ಯರು

ಜೀವೇಶ ಭೇದಗುಣಪೂರ್ತಿ ಜಗತ್ಸುಸತ್ವ ನೀಚೋಚ್ಚಭಾವ
ಮುಖನಕ್ರಗಣೈಃ ಸಮೇತಾ ।
ದುರ್ವಾದ್ಯಜಾಪತಿಗಿಲೈರ್ಗುರುರಾಘವೇಂದ್ರ ವಾಗ್ದೇವತಾ ಸರಿತ್
ಅಮುಂ ವಿಮಲೀಕರೋತು ॥ ೨ ॥

ಗಂಗಾಜಲವು ಮಾಲಿನ್ಯವನ್ನು ಕಳೆದು ಪಾವನಗೊಳಿಸುವಂತೆ ಶ್ರೀಗುರುಗಳ ವಾಣಿಯು ನಮ್ಮೆಲ್ಲರ ಮನಮಾಲಿನ್ಯವನ್ನೆಲ್ಲ ಕಳೆದು ಉದ್ಧರಿಸಲಿ!

ಚಂದ್ರನಿಗೆ ಉಗಮಸ್ಥಾನವಾದ, ಸಮುದ್ರವನ್ನೇ ಸೇರುತ್ತಿರುವಂಥ (**ಗಂಗೆ**), ಕಾಮಾರಿಯಾದ ಹಾಗು ಜ್ಞಾನವೇ ಕಣ್ಣುಳ್ಳ ಆ ಮುಕ್ಕಣ್ಣನ ಶಿರೋಭೂಷಿತೆಯಾದ (**ಗಂಗೆ**), ಪೂರ್ವೋತ್ತರವಾಗಿ ಅಗಣಿತ ತೆರೆಗಳಿಂದ ಶೋಭಿಸುವ ತೀರಗಳುಳ್ಳ (**ಗಂಗೆ**), ಹಾಗು ಚಾರುಹಂಸಗಳಿಂದ ಕಂಗೊಳಿಸುತ್ತಿರುವ (**ಗಂಗೆ**) ಸದಾ ಸುರರಿಂದ ಸೇವಿಸಲ್ಪಡತಕ್ಕ ಪರಮಾತ್ಮ (**ಹರಿ**)ನ ಪಾದಕಮಲಗಳಿಂದ ಹುಟ್ಟಿ ಹರಿದುಬಂದ ಗಂಗೆಯು, ಈ ನನ್ನನ್ನು ನಿರ್ದೋಷನನ್ನಾಗಿ ಮಾಡಿ ಪವಿತ್ರಗೊಳಿಸಲಿ!

ಸತ್ಯಸುಜ್ಞಾನ ಸಂಪೂರ್ಣರಾದ ಶ್ರೀಮದಾಚಾರ್ಯರ ಶಾಸ್ತ್ರಾದಿ ತತ್ವಗಳ **ದ್ವೈತಸಿದ್ಧಾಂತ** ಸಾಗರವೇ ದಡವಾಗಿರುವಂಥ, ಕಾಮಾದಿ ಷಡ್ವರ್ಗಗಳನ್ನು ಗೆದ್ದು, ಜ್ಞಾನವೆಂಬ ದಿವ್ಯ ದೃಷ್ಟಿಯುಳ್ಳ ಜ್ಞಾನಿಗಳಿಗೆ ಶಿರಸಾಮಾನ್ಯವಾಗಿ ಸುಸಮ್ಮತವಾಗಿರುವಂಥ, ಗುಣಗಳುಳ್ಳ ಹಾಗು ಪೂರ್ವ ಮತ್ತು ಉತ್ತರ ಮೀಮಾಂಸ ಶಾಸ್ತ್ರಗಳಲ್ಲಿ ಬಲ್ಲವರಾದ ಯತಿಗಳುಳ್ಳ (ರಾಯರ ವಾಣಿಯೇ ಪ್ರಮಾಣವೆಂದು ನಂಬಿರುವ ಯತಿಗಳುಳ್ಳ ) ಸದಾ ದೇವಾದಿ ಸಮೂಹದಿಂದ ಸಂಸೇವ್ಯವಾಗಿ ಶ್ರೀ ಹರಿಯ ಪಾದಕಮಲಗಳ ವಿಷಯವಾಗಿ ವರ್ಣನೆಯುಳ್ಳ ಹಾಗು ದುರ್ವಾದಿಗಳೆಂಬ ಹೋತು (ಅಪಸಿದ್ಧಾಂತಗಳನ್ನು ಅಪಸ್ವರದಿಂದ ಒದರುತ್ತಿರುವ ಹೋತುಗಳಂತಿರುವ ಕುವಾದಿಗಳು) ಗಳನ್ನು ನುಂಗಿ ನೀರು ಕುಡಿಯುವಂಥ,

ಶ್ರೀಮನ್ಮಧ್ವಮತೇ ಹರಿಃ ಪರತರಃ । ಸತ್ಯಂ ಜಗತ್ ।
ತತ್ತ್ವತೋಭೇದಃ । ಜೀವಗಣಾ ಹರೇರನುಚರಾಃ ।
ನೀಚೋಚ್ಚಭಾವಂಗತಾಃ । ಮುಕ್ತಿರ್ನೈಜ ಸುಖಾನುಭೂತಿರಮಲಾ ।
ಭಕ್ತಿಶ್ಚ ತತ್ಸಾಧನಂ । ಹ್ಯಕ್ಷಾದಿತ್ರಿತಯಂ ಪ್ರಮಾಣಮಖಿಲಾಮ್ನಾಯೈಕ
ವೇದ್ಯೋ ಹರಿಃ ॥

ಜೀವೇಶರಲ್ಲಿ ಭೇದವಿದೆ, ಪರಮಾತ್ಮನು ಸರ್ವಗುಣ ಸಂಪೂರ್ಣನು, ಜಗತ್ತಿನಲ್ಲಿ ಪಾರಮಾರ್ಥಿಕ ಸತ್ಯತೆಯುಂಟು, ಮತ್ತು ಉಚ್ಚ ನೀಚ ಭಾವಗಳ ತಾರತಮ್ಯ ವುಂಟಾದ ಈ ವಿಚಾರ ತತ್ವಗಳೆಂಬ ಹೊನಲುಗಳ ಗರ್ಭದಿಂದ ಕೂಡಿದಂತಹ, ಅಂದರೆ ಶ್ರೀಮನ್ಮಧ್ವತತ್ತ್ವಗಳನ್ನು ಪ್ರತಿಪಾದಿಸುವಂತಹ, ಶ್ರೀ ಗುರುಗಳ ವಚನ ಗಂಗೆಯು ನನ್ನನ್ನು ಪಾವನಗೊಳಿಸಿ ಅನುಗ್ರಹಿಸಲಿ!

ಶ್ರೀ ರಾಘವೇಂದ್ರಃ ಸಕಲ ಪ್ರದಾತಾ ಸ್ವಪಾದಕಂಜದ್ವಯ
ಭಕ್ತಿಮದ್ಭ್ಯಃ ।
ಅಘಾದ್ರಿ ಸಂಭೇದನ ದೃಷ್ಟಿವಜ್ರಃ ಕ್ಷಮಾ ಸುರೇಂದ್ರೋಽವತು ಮಾಂ
ಸದಾಯಂ ॥ ೨ ॥

ಭಕ್ತರ ದುರಿತಗಳನ್ನು ಕಳೆದು, ಮನೋರಥಗಳನ್ನು ನೀಡಿ ಅನುಗ್ರಹಿಸುವರು, ಗುರುಗಳು

ತಮ್ಮ ಚರಣಕಮಲಗಳಲ್ಲಿ ಭಕ್ತಿಯುಳ್ಳವರಿಗೆ ಸರ್ವಾಭೀಷ್ಟಗಳನ್ನು ದಯಪಾಲಿಸತಕ್ಕವರು ಶ್ರೀ ರಾಘವೇಂದ್ರ ಗುರುಗಳು. ಕೇವಲ ದೃಷ್ಟಿಮಾತ್ರದಿಂದಲೇ ಪಾಪಗಳ ಬೆಟ್ಟಗಳನ್ನೇ ಸೀಳಿಬಿಡುವ ವಜ್ರಾಯುಧದಂತೆ ಸಾಮರ್ಥ್ಯ ಉಳ್ಳ ಒಳ್ಳೇ ವಿಪ್ರ ಶ್ರೇಷ್ಠರು ಇವರು ನನ್ನನ್ನು ಸದಾ ರಕ್ಷಿಸಲಿ.

ಶ್ರೀ ರಾಘವೇಂದ್ರೋ ಹರಿಪಾದಕಂಜ ನಿಷೇವಣಾಲ್ಲಬ್ಧ
ಸಮಸ್ತ ಸಂಪತ್ ।
ದೇವಸ್ವಭಾವೋ ದಿವಿಜದ್ರುಮೋಽಯಮಿಷ್ಟಪ್ರದೋ ಮೇ ಸತತಂ
ಸಭೂಯಾತ್ ॥ ೩ ॥

ಪ್ರಹ್ಲಾದ, ವ್ಯಾಸರಾಯರು, ಶ್ರೀ ರಾಘವೇಂದ್ರರು ಹೀಗೆ ಮೂರೂ ಅವತಾರಗಳಲ್ಲಿ ಶ್ರೀ ಹರಿಯನ್ನು ಸೇವಿಸಿ ಆರಾಧಿಸಿದವರಾದ್ದರಿಂದ, ಇವರಿಗೆ ಇಹ ಪರಗಳೆರಡೂ ಹಸ್ತಗತವಾದವುಗಳು, ಇವರು ದೇವಾಂಶರು

ಶ್ರೀಹರಿ ಪಾದಪಂಕಜಗಳ ಸೇವೆಯಿಂದ ನೀವು ಇಹಪರಗಳೆರಡುಗಳ ಸಮಗ್ರ ಸಂಪತ್ತನ್ನು ಪಡೆದುಕೊಂಡವರು, ನಿಮ್ಮದು ದೇವಸ್ವಭಾವವು, ದೇವಾಂಶರು, ಪ್ರತ್ಯಕ್ಷ ಕಲ್ಪವೃಕ್ಷವೇ ನೀವು; ಇಂತಹ ಈ ಸುಗುಣ ಸಾಂದ್ರರಾದ ಶ್ರೀಗಳು ನನಗೆ ಸದಾ ಇಷ್ಟಾರ್ಥಗಳನ್ನೆಲ್ಲ ಈಡೇರಿಸುವವರಾಗಲಿ!

ಭವ್ಯಸ್ವರೂಪೋಭವದುಃಖತೂಲ ಸಂಘಾಗ್ನಿಚರ್ಯಃ
ಸುಖಧೈರ್ಯಶಾಲೀ ।
ಸಮಸ್ತ ದುಷ್ಟಗ್ರಹ ನಿಗ್ರಹೇಶೋ ದುರತ್ಯಯೋಪಪ್ಲವ
ಸಿಂಧು ಸೇತುಃ ॥ ೫ ॥

ಪ್ರಪಂಚದ ವಿವಿಧಾನೇಕ ತಾಪತ್ರಯಗಳು, ಹಾಗು ದುಷ್ಟಾನಿಷ್ಟ ಗ್ರಹಾದಿಗಳ ಪೀಡೆ, ಇವುಗಳನ್ನೆಲ್ಲ ನಿವಾರಿಸಿ ಬಿಡುವದು ಅವರ ಸೇವೆ.

ಭವ್ಯ ದಿವ್ಯ ಸ್ವರೂಪರಾದ ಮೌನಿಮಣಿಗಳು, (ಕ್ಯಾಟಿದಂಡಕಮಂಡಲು ಶ್ರೀವೈಷ್ಣವ ಊರ್ಧ್ವಪುಂಡ್ರಾದಿ ಸಲಕ್ಷಣಗಳಿಂದಲೂ ದೇವತೇಜಸ್ಸಿನಿಂದಲೂ) ದೀನಜನರ ಸಂಸಾರತಾಪಸಂತಾಪಗಳೆಂಬ ಅರಳೆಯ ಸಮೂಹಕ್ಕೆಲ್ಲ ಬೆಂಕಿಯಂತಿರುವವರು, ನಿತ್ಯಸುಖ ಪಡೆದಿರುವಾತ್ಯಂತಧೈರ್ಯಶಾಲಿಗಳು, ಎಲ್ಲತರದ ಗ್ರಹಪೀಡೆಗಳನ್ನು ದಂಡಿಸುವದರಲ್ಲಿ ಒಳ್ಳೇ ನಿಗ್ರಹಶಕ್ತಿವಂತರು ನೀವು, ಹಾಗೂ ದಾಟಲು ಅತಿ ದುಸ್ತರವಾದ ಈ ದುಃಖಮಯ ಸಮುದ್ರಕ್ಕೆ ಸೇತುವೆಯಂತಿರುವವರು ನೀವು.

ನಿರಸ್ತ ದೋಷೋನಿರವದ್ಯವೇಷಃ ಪ್ರತ್ಯರ್ಥಿ
ಮೂಕತ್ವನಿದಾನಭಾಷಃ ।
ವಿದ್ವತ್ಪರಿಜ್ಞೇಯ ಮಹಾವಿಶೇಷೋ ವಾಗ್ವೈಖರೀ
ನಿರ್ಜಿತಭವ್ಯಶೇಷಃ ॥ ೬ ॥

ಚರ್ಚಾವಾದಸಭೆಗಳಲ್ಲಂತೂ ಇವರ ಕೈಯನ್ನು ಹಿಡಿದವರೇ ಇಲ್ಲ. ವಾದೀಭಸಿಂಹರೇ ಇವರು !

ಶುದ್ಧನಿರ್ಮಲವೇಷವುಳ್ಳವರು ತೇಜಸ್ವಿಗಳು, ದೋಷರಹಿತರು ( ವಿಷಯಾದಿ ದೋಷಶೂನ್ಯರು ) ಇವರ ಮುಂದೆ ವಾದಿಸುವ ವಾದಿಗಳಿಗೆ ಮೂಕರನ್ನಾಗಿಮಾಡಿ ಮುಂದೆ ಬಾಯಿಯೇ ಏಳದಂತೆ ಮಾಡುವ ವಚನ ವಿಲಾಸವುಳ್ಳವರಿವರು, ವಿದ್ವಾಂಸರಿಗೆ ಮಾತ್ರ ಗಮ್ಯವಾಗಿರುವಂಥ ಮಹಿಮಾಶಾಲಿಗಳು, ತಮ್ಮ ವಾಗ್ವೈಖರೀವಿಲಾಸದಿಂದ ೧ ಭವ್ಯಾಕೃತಿ ಉಳ್ಳ ಆದಿಶೇಷನನ್ನು ಮೆಚ್ಚಿಸಿ ತಲೆದೂಗಿಸುವವರು, ೨ ತಮ್ಮ ಅಸ್ಖಲಿತ ದಿವ್ಯವಾಣಿಯಿಂದ ಶೇಷಶರ್ಮನನ್ನೂ ಸಮಸ್ತ ಜನರನ್ನೂ ಸೋಲಿಸಿದ, ಸದಾ ಗೆಲುವಿನ ಮಹಾನುಭಾವರು ಇವರು !

ಸಂತಾನ ಸಂಪತ್ಪರಿಶುದ್ಧಭಕ್ತಿ ವಿಜ್ಞಾನವಾಗ್ದೇಹ
ಸುಪಾಟವಾದೀನ್ ।
ದತ್ವಾ ಶರೀರೋತ್ಥ ಸಮಸ್ತ ದೋಷಾನ್ ಹತ್ವಾ
ಸನೋಽವ್ಯಾತ್ ಗುರುರಾಘವೇಂದ್ರಃ ॥ ೭ ॥

ಬೇಡಿ ಬಯಸಿದ ಬಯಕೆಗಳನ್ನೆಲ್ಲ ದಯಪಾಲಿಸಿ ಉದ್ಧಾರಮಾಡುವಂತಹ ಗುರುಗಳಿವರು.

ಸಂತಾನಸಂಪತ್ತು, ಶುದ್ಧಭಕ್ತಿ, ಹೆಚ್ಚಿನಜ್ಞಾನ, ವಾಕ್ ಶರೀರಗಳ ಸುಪಾಟವಗಳನ್ನೆಲ್ಲ ಅನುಗ್ರಹಿಸಿ, ದೇಹದಲ್ಲಿರುವ• ಹಾಗು ದೇಹದಿಂದ ಹುಟ್ಟುವಂಥ ಎಲ್ಲ ಆಧಿವ್ಯಾಧಿ ಪಾಪತಾಪ ಸಂತಾಪಗಳನ್ನು ನಾಶಗೊಳಿಸಿ ಈ ಮಹಾತ್ಮರಾದ ಗುರುಗಳು ನಮ್ಮನ್ನು ಕಾಪಾಡಲಿ !

ಯತ್ಪಾದೋದಕ ಸಂಚಯಃ ಸುರನದೀ ಮುಖ್ಯಾಪಗಾಸಾದಿತಾ-
ಸಂಖ್ಯಾನುತ್ತಮಪುಣ್ಯಸಂಘವಿಲಸತ್ ಪ್ರಖ್ಯಾತ ಪುಣ್ಯಾವಹಃ ।
ದುಸ್ತಾಪತ್ರಯನಾಶನೋಽಭುವಿ ಮಹಾವಂಧ್ಯಾಸುಪುತ್ರಪ್ರದೋ
ವ್ಯಂಗಸ್ವಂಗ ಸಮೃದ್ಧಿದೋಗ್ರಹಮಹಾಪಾಪಾಪಹಸ್ತಂ
ಶ್ರಯೇ ೮

ಶ್ರೀ ಗುರುಗಳ ಸೇವೆಯಿಂದ ಕುರುಡ ಕುಂಟೆ ಮೂಕ ಹೆಳವಾದಿ ವ್ಯಂಗ ಜನರು, ಉದ್ಧಾರವಾಗುವರಲ್ಲದೆ, ಇಷ್ಟಾರ್ಥಗಳನ್ನು ಪಡೆದುಕೊಳ್ಳುತ್ತಾರೆ ಮತ್ತು ಆಧಿವ್ಯಾಧ್ಯಾದಿತಾಪತ್ರಯಗಳೂ ನಾಶವಾಗಿ ಸುಖ ಪಡೆಯುತ್ತಾರೆ, ಭಕ್ತರು ಇವರ ಆಶ್ರಯದಿಂದ !

ಶ್ರೀಗುರು ಪಾದೋದಕ ಸಮೂಹವು, ಗಂಗಾದಿ ಪಾವನಕರ ನದಿಗಳ ಸ್ನಾನಪಾನಾದಿಗಳಿಂದ ಪ್ರಾಪ್ತವಾಗುವ ಅಸಂಖ್ಯ ಹಾಗು ಉತ್ಕೃಷ್ಟ ಪುಣ್ಯ ಸಂಚಯಕ್ಕೆ ಸಮನಾದ ಪುಣ್ಯವನ್ನು ದಯಪಾಲಿಸುವಂತಹದು, ತೀವ್ರ ತೀಕ್ಷ್ಣ ತಾಪತ್ರಯಗಳನ್ನು ನಿವಾರಿಸುವಂತಹದು, ಪ್ರಪಂಚದಲ್ಲಿ ಬರಡು ಬಂಜೆಯಾದವಳಿಗೂ ಕೂಡ ಸತ್ಪುತ್ರ ಪ್ರಾಪ್ತಿಮಾಡಿಕೊಡುವಂತಹದು; ಅಂಗಾವಯವಗಳಿಂದ ವ್ಯಂಗವಾಗಿರುವವರಿಗೆ, ಸ್ವಾಂಗಸಮೃದ್ಧಿ ನೀಡಿ ಉದ್ಧರಿಸುವಂತಹದು, ಮತ್ತು ಅನಿಷ್ಟ ಗ್ರಹಕಾಟ ಹಾಗು ಪಾಪಪಾತಕಗಳನ್ನೆಲ್ಲಿ ನೀಗಿಸಿ ಬಿಡುವಂತಹದು, ಇಂಥ ಮಹಾಮಹಿಮರನ್ನು ನಾನು ಆಶ್ರಯಿಸುವೆ

ಯತ್ಪಾದಕಂಜರಜಸಾ ಪರಿಭೂಷಿತಾಂಗಾ ಯತ್ಪಾದಪದ್ಮ
ಮಧುಪಾಯಿತ ಮಾನಸಾಯೇ ।
ಯತ್ಪಾದಪದ್ಮ ಪರಿಕೀರ್ತನ ಜೀರ್ಣವಾಚಃ ತದ್ದರ್ಶನಂ
ದುರಿತಕಾನನ ದಾವಭೂತಂ ॥ ೯ ॥

ಈ ಶ್ರೀಗಳವರ ದರ್ಶನಮಾತ್ರದಿಂದ, ದುರಿತ ರಾಶಿಗಳೆಲ್ಲ ದೂರವಾಗುವವು.

ಶ್ರೀ ಗುರುರಾಜರ ಪಾದಾರವಿಂದ ಧೂಳಿಯಿಂದ ಅವಯವಾದಿಗಳೆಲ್ಲ ಪಾವನವಾಗಿರುವವೋ, ಯಾರ ಪಾದಾರವಿಂದಗಳಲ್ಲಿ ಏಕಾಗ್ರ (ನೆಟ್ಟ) ಮನಸ್ಸುಳ್ಳವರೋ, ಮತ್ತು ಯಾರ ಪಾದಪದ್ಮಗಳ ಹಿರಿಮೆಯನ್ನು ಹೊಗಳಿ, ಕೊಂಡಾಡಿಯೇ ತಮ್ಮ ವಾಣಿಯನ್ನು ಸವೆಸಿ ಪಾವನಗೊಂಡು ಪರಿಪಕ್ವವಾಗಿರುವದೋ, ಇಂತಹ ಆಮರಣ ಸೇವಾ ಶರಣರ ಪಾಪಗಳೆಂಬ ಕಾಡಿಗೆ, ಕಾಳ್ಗಿಚ್ಚಿಗೆ ಸಮನಾದದ್ದು ಈ ಮಹಾನುಭಾವರ ದರ್ಶನವು. ಇವರ ದರ್ಶನದಿಂದುಂಟಾಗುವ ಫಲ ಅಸಾದೃಶವಾದದ್ದು.

ಸರ್ವತಂತ್ರ ಸ್ವತಂತ್ರೋಽಸೌ ಶ್ರೀಮಧ್ವಮತವರ್ಧನಃ ।
ವಿಜಯೀಂದ್ರ ಕರಾಬ್ಜೋತ್ಥ ಸುಧೀಂದ್ರವರಪುತ್ರಕಃ ॥೧೦

ಗುರುರಾಜರು ಶ್ರೀಮಧ್ವಮತವನ್ನು ಬೆಳೆಸಿ ವರ್ಧಮಾನಗೊಳಿಸುತ್ತಾರೆ. ಇಂಥ ಶಿಷ್ಯರು ಸಿಕ್ಕಿದ್ದಕ್ಕೆ ಶ್ರೀ ಸುಧೀಂದ್ರರೇ ಸುಕೃತಶಾಲಿಗಳು!

ಎಲ್ಲ ಶಾಸ್ತ್ರಾದಿಗಳೊಳಗೆ ಸುವಿಚಾರ ಸ್ವತಂತ್ರರು ಇವರು. (ಇವರ ಗ್ರಂಥಗಳೇ ಸಾಕ್ಷಿ) ಶ್ರೀಮನ್ಮಧ್ವಮತತತ್ತ್ವಗಳನ್ನು ಬೆಳೆಸಿ ಬಿಂಬಿಸಿ ವೃದ್ಧಿಗೊಳಿಸಿದವರಿವರು ಶ್ರೀ ವಿಜಯೀಂದ್ರ ತೀರ್ಥರ ಕರಕಮಲ ಸಂಜಾತರಾದ ಶ್ರೀ ಸುಧೀಂದ್ರರಿಗೆ ಶ್ರೀ ರಾಮನ ಅನುಗ್ರಹದಿಂದ ಲಭಿಸಿದ ಪುತ್ರರು ಇವರು

"ಪುಷ್ಪಿತೋಽಯಂ (ಶ್ರೀಮಧ್ವಮತವೆಂಬ ಮರವು) ಜಯೀಂದ್ರಾದ್ ಅದ್ಯ ಶ್ರೀ ರಾಘವೇಂದ್ರಾತ್ ವಿಲಸತಿ ಫಲಿತೋ ಮಧ್ವಸಿದ್ಧಾಂತ ಶಾಖೀ"

ಶ್ರೀ ರಾಘವೇಂದ್ರೋಽಯತಿರಾಟ್ ಗುರುರ್ಮೇಸ್ಯಾದ್ಭಯಾಪಹಃ ।
ಜ್ಞಾನಭಕ್ತಿಸುಪುತ್ರಾಯುರ್ಯಶಃ ಶ್ರೀ ಪುಣ್ಯವರ್ಧನಃ ॥೧೧॥

ಇಹಪರ ಸುಖಸಂಪತ್ತನ್ನು ಅನುಗ್ರಹಿಸುವದರಲ್ಲಿ ಸಾಮರ್ಥ್ಯಶೀಲರು, ಮಹಿಮಾತಿಶಯದಿಂದ ಮೆರೆಯುತ್ತಿರುವ ಈ ಮಹಾತ್ಮರು, ಭಕ್ತಾದಿಗಳಿಗೆಲ್ಲ ಸಂತಾನ, ಸಂಪತ್ತು, ಕಳತ್ರ, ಸುಯಶ, ಪರಮಾಯು, ಜ್ಞಾನ, ಸದ್ಭಕ್ತಿಗಳನ್ನೆಲ್ಲ ಸಮೃದ್ಧವಾಗಿ ದಯಪಾಲಿಸುವಂಥವರು, ಯತಿಪುಂಗವರು, ನನ್ನನ್ನು ಅಭಯವನ್ನಿತ್ತು, ಹರಸಿ ಸಲಹುತ್ತಿರಲಿ!

ಪ್ರತಿವಾದಿಜಯಸ್ವಾಂತ ಭೇದಚಿಹ್ನಾದರೋ ಗುರುಃ ।
ಸರ್ವವಿದ್ಯಾಪ್ರವೀಣೋಽನ್ಯೋ ರಾಘವೇಂದ್ರಾನ್ನ ವಿದ್ಯತೇ ॥೧೨॥

ವಾದಿಗಳನ್ನು ಖಂಡಿಸಿ ಸೋಲಿಸುವದರಲ್ಲಿ ಒಳ್ಳೇ ವಿಶಾರದರು ಇವರು.

ಎದುರಾಳಿಗಳಾದ ವಾದಿಗಳ ಮತತತ್ತ್ವ ಸಿದ್ಧಾಂತಗಳನ್ನೆಲ್ಲ ಖಂಡಿಸುವದರಲ್ಲಿ ಒಳ್ಳೆ ಎದೆಯುಳ್ಳವರು, ಎಲ್ಲ ವಿದ್ಯೆಗಳಲ್ಲಿ ಒಳ್ಳೆ ವಿಶಾರದರು, ಇವರಿಗೆ ಸಮರಾದವರು ಬೇರೊಬ್ಬರಿಲ್ಲ

ಅಪರೋಕ್ಷೀಕೃತಶ್ರೀಶಃ ಸಮುಪೇಕ್ಷಿತಭಾವಜಃ ।
ಅಪೇಕ್ಷಿತಪ್ರದಾತಾನ್ಯೋ ರಾಘವೇಂದ್ರಾನ್ನವಿದ್ಯತೆ ॥೧೨॥

ಪರಮಾತ್ಮನನ್ನು ಪ್ರತ್ಯಕ್ಷೀ ಕರಿಸಿಕೊಂಡ ಪುಣ್ಯವಂತರಿವರು ಶ್ರೀ ಹರಿಯನ್ನು ಒಲಿಸಿಕೊಂಡು ಸಾಕ್ಷಾತ್ಕರಿಸಿಕೊಂಡವರಾಗಿ, ಕಾಮಾದಿ ಷಡ್ವರ್ಗವನ್ನೆಲ್ಲ ಗೆದ್ದವರಾಗಿ, ಭಕ್ತಾದಿಗಳಿಗೆಲ್ಲ ಬೇಡಿಬಯಸಿದ್ದನ್ನೆಲ್ಲ ನೀಡುವದರಲ್ಲಿ ಇವರಿಗೆ ಸಮಾನರು ಬೇರೊಬ್ಬರಿಲ್ಲ.

ದಯಾದಾಕ್ಷಿಣ್ಯ ವೈರಾಗ್ಯ ವಾಕ್ಪಾಟವ ಮುಖಾಂಕಿತಃ ।
ಶಾಪಾನುಗ್ರಹ ಶಕ್ತೋಽನ್ಯೋ ರಾಘವೇಂದ್ರಾನ್ನವಿದ್ಯತೇ ॥ ೧೪ ॥

ಭಕ್ತ ಜನರಲ್ಲಿ ಪರಮ ದಯಾಶೀಲರು, ಅವರನ್ನೆತ್ತಿ ಉದ್ಧರಿಸುವದರಲ್ಲಿ ಒಳ್ಳೇ ಜಾಗೃತರು; ಒಳ್ಳೇ ದಾಕ್ಷಿಣ್ಯವಂತರು, ದುಷ್ಟ ನಿಗ್ರಹ ಹಾಗು ಶಿಷ್ಟ ಪರಿಪಾಲನೆಯಲ್ಲಿ ಇವರದು ಎತ್ತಿದ ಕೈ ಸದ್ದಯಾದಾಕ್ಷಿಣ್ಯ, ವೈರಾಗ್ಯ ಭಾಗ್ಯ, ಸ್ಥುಬುದ್ಧಿ, ವಾಕ್ಪಟುತ್ವ ಮುಂತಾದವುಗಳಲ್ಲಿಯೂ ಸಿದ್ಧಿ ಶಾಪಾನುಗ್ರಹ ಶಕ್ತಿ ಪ್ರಸಿದ್ಧಿಗಳಲ್ಲ ಸದಾ ಪ್ರಸಿದ್ಧರಾದವರು, ಇಂಥ ಈ ಗುರುಗಳಿಗೆ ಸಮನಾರೂ ಇಲ್ಲ.

ಅಜ್ಞಾನವಿಸ್ಮೃತಿ ಭ್ರಾಂತಿಸಂಶಯಾಪಸ್ಮೃತಿಕ್ಷಯಾಃ ।
ತಂದ್ರಾಕಂಪವಚಃ ಕೌಂಠ್ಯಮುಖಾಯೇ ಚೇಂದ್ರಿಯೋದ್ಭವಾಃ ।
ದೋಷಾಸ್ತೇ ನಾಶಮಾಯಾಂತಿ ರಾಘವೇಂದ್ರ ಪ್ರಸಾದತಃ ॥ ೧೫ ॥

ಮಾನಸಿಕ ಹಾಗು ದೈಹಿಕ ದೋಷಗಳೆಲ್ಲವೂ ರಾಯರ ಅನುಗ್ರಹದಿಂದ ನಾಶಹೊಂದುತ್ತವೆ.

ಅಜ್ಞಾನ (ತಿಳಿಗೇಡಿತನ), ಮರವು, ಭ್ರಮೆ, ಕ್ಷಯಾಪಸ್ಮಾರ, ಆದಿ. ರೋಗಗಳು, ಅವಯವಾದಿಗಳ ಜಾಡ್ಯ, ಶಿಥಿಲತೆ, ಗುಕ್ಕತನ (ತೊದಲ್ನುಡಿ) ಆದಿ ಐಂದ್ರಿಕ ದೋಷಗಳು, ಮುಂತಾದ ಮಾನಸಿಕ ಹಾಗು ದೈಹಿಕ ದೋಷಗಳೆಲ್ಲವೂ ಶ್ರೀ ಗುರುಪ್ರಸಾದದಿಂದ ದೂರಾಗಿಬಿಡುವವು.

"ಓಂ ಶ್ರೀ ರಾಘವೇಂದ್ರಾಯನಮಃ" ಇತ್ಯಷ್ಟಾಕ್ಷರಮಂತ್ರತಃ ।
ಜಪಿತಾದ್ಭಾವಿತಾನ್ನಿತ್ಯಮಿಷ್ಟಾರ್ಥಾಃಸ್ಯುರ್ನ ಸಂಶಯಃ ॥ ೧೬ ॥

ನಿಮ್ಮ ನಾಮ ಜಪಧ್ಯಾನದಿಂದ ಎಲ್ಲ ಇಷ್ಟಾರ್ಥಗಳೂ ಕೈಗೂಡುವವು. "ಓಂ ಶ್ರೀ ರಾಘವೇಂದ್ರಾಯನಮಃ" ಎಂಬೀ ದಿವ್ಯಾಷ್ಟಸಾರಾಕ್ಷರಗಳ ಮಂತ್ರದಿಂದ ಭಕ್ತಿಪುರಃಸರವಾಗಿ ನಿಮ್ಮನ್ನು ಜಪಿಸಿ ಆರಾಧಿಸುವದರಿಂದ ಎಲ್ಲತರದ ಬೇಕುಬಯಕೆಗಳು ಸಿದ್ಧಿಸುವದರಲ್ಲಿ ಏನೂ ಸಂಶಯವಿಲ್ಲ.

ಹಂತು ನಃ ಕಾಯಜಾನ್ ದೋಷಾನಾತ್ಮಾತ್ಮೀಯ ಸಮುದ್ಭವಾನ್।
ಸರ್ವಾನಪಿ ಪುಮರ್ಥಾಂಶ್ಚ ದದಾತು ಗುರುರಾತ್ಮವಿತ್ ॥೧೭॥

ಧರ್ಮಾರ್ಥಕಾಮಮೋಕ್ಷಾದಿ ಚತುರ್ವಿಧ ಪುರುಷಾರ್ಥಗಳನ್ನು ದಯ ಪಾಲಿಸಿ ಅನುಗ್ರಹಿಸುತ್ತಾರೆ ಇವರು.

ಅಪರೋಕ್ಷಜ್ಞಾನಿಗಳಾದ ನಮ್ಮ ಈ ಗುರುಗಳು ನಮ್ಮ ದೇಹದಿಂದ ಹುಟ್ಟಿಬರುವ ದೋಷಗಳನ್ನೂ, ತಮ್ಮಿಂದ ತಾವೇ ಉಂಟಾಗುವ ದೋಷಗಳನ್ನೂ ಹಿಂಗಿಸಿ, ಧರ್ಮಾರ್ಥಕಾಮಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳನ್ನು ನೀಡುವವರಾಗಲಿ ಅಂದರೆ ಇಲ್ಲಿ ಐಹಿಕ ಸುಖಸಂಪತ್ತುಗಳ ಲಾಭವಾಗಿ ಸದ್ಧರ್ಮಪ್ರವೃತ್ತಿಯುಂಟಾಗಿ ಕೊನೆಗೆ ಮೋಕ್ಷಪ್ರಾಪ್ತಿಯಾಗುವಂತೆ ಭಕ್ತರನ್ನು ಅನುಗ್ರಹಿಸುತ್ತಾರೆ.

ಇತಿ ಕಾಲತ್ರಯೇ ನಿತ್ಯಂ ಪ್ರಾರ್ಥನಾಂ ಯಃ ಕರೋತಿ ಸಃ ।
ಇಹಾಮುತ್ರಾಪ್ತ ಸರ್ವೇಷ್ಟೋಮೋದತೇ ನಾತ್ರಃಸಂಶಯಃ ॥೧೮॥

ಯಿಂದ ತ್ರಿಕಾಲವೂ ಇವರನ್ನು ಪ್ರಾರ್ಥಿಸುವದರಿಂದ, ಇಹಪರಗಳೆರಡೂ ಸಾಧಿಸುತ್ತವೆ ಭಕ್ತರಿಗೆ.

ಈ ವಿಧವಾಗಿ ತ್ರಿಕಾಲಗಳಲ್ಲಿಯೂ ಒಳ್ಳೇ ಭಕ್ತಿ-ವಿಶ್ವಾಸಗಳಿಂದ, ಇವರನ್ನು ಭಜಿಸಿ ಪೂಜಿಸಿ ಆರಾಧಿಸುವದರಿಂದ, ಭಕ್ತಾದಿಗಳಿಗೆ ಪ್ರಪಂಚದಲ್ಲಿ ಸರ್ವ ಸುಖವುಂಟಾಗಿ, ಮುಂದೆ ಪರಲೋಕ ಪ್ರಾಪ್ತಿಯಾಗಿ ಮೋಕ್ಷಲಾಭವೂ ಆಗುತ್ತದೆ.

ಅಗಮ್ಯ ಮಹಿಮಾ ಲೋಕೇ ರಾಘವೇಂದ್ರೋ ಮಹಾಯಶಾಃ ।
ಶ್ರೀಮಧ್ವಮತದುಗ್ಧಾಬ್ಧಿ ಚಂದ್ರೋಽವತು ಸದಾನಘಃ ॥೧೯॥

ಕ್ಷೀರಸಮುದ್ರವು ಚಂದ್ರನಿಂದ ಉತ್ಕರ್ಷಹೊಂದಿ ಕಂಗೊಳಿಸುವಂತೆ, ಶ್ರೀಮಧ್ವಮತವು ಈ ಗುರುಗಳಿಂದ ಅರಳಿ ಹೆಚ್ಚಿ ಉತ್ಕರ್ಷೋನ್ನತಿಗಳನ್ನು ಪಡೆದಿರುತ್ತದೆ.

"ಅದ್ಯ ಶ್ರೀ ರಾಘವೇಂದ್ರಾತ್ ವಿಲಸತಿ ಫಲತೋ ಮಧ್ವಸಿದ್ಧಾಂತ ಶಾಖೀ "

ಈ ಮಹಾನುಭಾವರ ಮಹಿಮೆಯು ಅಗಾಧವೂ ಅಗಮ್ಯವೂ ಆಗಿದೆ ಅತುಲ ಕೀರ್ತಿಶಾಲಿಗಳು; ಮಧ್ವ ಸಿದ್ಧಾಂತ ತತ್ವಗಳಿಂದ ತುಂಬಿದ ಶ್ರೀಮಧ್ವ ಮತವೆಂಬ ಕ್ಷೀರಸಮುದ್ರಕ್ಕೆ, ಚಂದ್ರೋಪಾದಿಯಲ್ಲಿ ಶೋಭಿಸಿ ಕಂಗೊಳಿಸುತ್ತಿರುವರು ಎಲ್ಲರ ಕಣ್ಣುಗಳಿಗೆ.

ಸರ್ವಯಾತ್ರಾ ಫಲಾವಾಪ್ತ್ಯೈ ಯಥಾಶಕ್ತಿ ಪ್ರದಕ್ಷಿಣಂ ।
ಕರೋಮಿ ತವ ಸಿದ್ಧಸ್ಯ ವೃಂದಾವನ ಗತಂ ಜಲಂ ।
ಶಿರಸಾಧಾರಯಾಮ್ಯದ್ಯ ಸರ್ವತೀರ್ಥಫಲಾಪ್ತಯೇ ॥ ೨೦ ॥

ಇವರ ಪ್ರದಕ್ಷಿಣೆ, ನಮಸ್ಕಾರ, ನಿರ್ಮಾಲ್ಯ ಹಾಗು ಪಾದೋದಕ ಧಾರಣೆ ಇವುಗಳಿಂದ ಸರ್ವ ಯಾತ್ರಾತೀರ್ಥಗಳ ಫಲವು ದೊರಕುತ್ತವೆ, ಇವರ ಬರೀ ಸೇವೆಯಿಂದ.

ಎಲ್ಲ ಕ್ಷೇತ್ರಾದಿಗಳ ಯಾತ್ರಾ ಫಲ ಪ್ರಾಪ್ತಿಯಾಗಲೋಸುಗ, ಸರ್ವ ಸಿದ್ಧಿಗಳನ್ನು ಪಡೆದಂಥ ನಿಮಗೆ, ನಾನು ಯಥಾಶಕ್ತಿ ಪ್ರದಕ್ಷಿಣೆ ಮಾಡುವೆನು. ಸರ್ವ ಪುಣ್ಯ ತೀರ್ಥಗಳ ಸ್ನಾನ ಪಾನಾದಿಗಳಿಂದ ಲಭಿಸುವ ಪುಣ್ಯ ಸಿಗಲೆಂದು ತಮ್ಮ ವೃಂದಾವನದ ಮೈಮೇಲಿನ ತೀರ್ಥೋದಕವನ್ನು ಶಿರಸಾ ಧಾರಣ ಮಾಡುವೆನು.

ಸರ್ವಾಭೀಷ್ಟಾರ್ಥ ಸಿದ್ಧ್ಯರ್ಥಂ ನಮಸ್ಕಾರಂ ಕರೋಮ್ಯಹಂ ।
ತವಸಂಕೀರ್ತನಂ ವೇದಶಾಸ್ತ್ರಾರ್ಥ ಜ್ಞಾನಸಿದ್ಧಯೇ ॥ ೨೧ ॥

ಗುರು ನಮಸ್ಕಾರದಿಂದ ಅಭೀಷ್ಟ ಸಿದ್ಧಿ, ಅವರ ಸ್ತೋತ್ರ ಸಂಕೀರ್ತನಗಳಿಂದ ವೇದಶಾಸ್ತ್ರಾದಿಗಳ ಜ್ಞಾನಪ್ರಾಪ್ತಿ, ಅಂದ ಮೇಲೆ ಶ್ರೀಗುರು ಸೇವೆಯೇ ಸರ್ವಸಿದ್ಧಿ ಸಾಧನಗಳಿಗೂ ಸುಲಭ ಸೋಪಾನವಾಗಿದೆ.

ನನ್ನ ಸರ್ವ ಮನೋರಥಗಳು ಈಡೇರಲೆಂದು, ತಮಗೆ ನಮಸ್ಕರಿಸು ತ್ತೇನೆ ಸರ್ವ ವೇದಶಾಸ್ತ್ರಾರ್ಥಗಳ ಯಥಾರ್ಥ ಜ್ಞಾನವಾಗಲೆಂದು, ತಮ್ಮ ಈ ಸ್ತೋತ್ರ ರೂಪ ಸಂಕೀರ್ತನೆ ಮಾಡುತ್ತೇನೆ ಸರ್ವಸಿದ್ಧಿ ಸಾಧನೆಗೆ ನಿಮ್ಮ ಸೇವೆಯೇ ಮೂಲ

ಸಂಸಾರೇಽಕ್ಷಯಸಾಗರೆ ಪ್ರಕೃತಿತೋಽಗಾಧೇ ಸದಾ ದುಸ್ತರೇ
ಸರ್ವಾವದ್ಯ ಜಲಗ್ರಹೈರನುಪಮೈಃ ಕಾಮಾದಿಭಂಗಾಕುಲೇ ।
ನಾನಾವಿಭ್ರಮದುರ್ಭ್ರಮೇಽಮಿತಭಯಸ್ತೋಮಾದಿಫೇನೋತ್ಕಟೇ
ದುಃಖೋತ್ಕೃಷ್ಟವಿಷೇ ಸಮುದ್ಧರ ಗುರೋ ಮಾಂ
ಮಗ್ನರೂಪಂ ಸದಾ ॥ ೨೨ ॥

ತ್ರಿಗುಣೀಮಾಯೆಯ ಮುಸುಕಿನಿಂದ ಮುಚ್ಚಲ್ಪಟ್ಟ ಈ ಪ್ರಪಂಚದಲ್ಲಿ ಷಡ್ರಿಪುಗಳು ಸದಾ ತಾಂಡವವಾಡುತ್ತಿದ್ದು, ಸದಾ ಸಂಸಾರಿಗಳಿಗೆ ತಾಪತ್ರಯ ಕಷ್ಟಾದಿಗಳು ತೊಡಕುಗಳು ಬಿದ್ದು, ಐಹಿಕ ಸುಖ ಲಭಿಸುವದೇ ಕಷ್ಟ, ನಿತ್ಯಶಾಶ್ವತ ಸುಖದ ಮಾತಂತೂ ಕೇಳಬಾರದು ಇಂಥ ವಿಷಮ ಕಾಲದೊ ಳಗೆ ಸರಿಯಾದಸುಸ್ಪಷ್ಟ ಸನ್ಮಾರ್ಗದ ಹೊಳೆಯುವ ಬೆಳಕನ್ನು ನೀಡಿ ಇಹಪರ ಸೌಖ್ಯಗಳನ್ನನುಗ್ರಹಿಸಿ ಉದ್ಧರಿಸುವ, ಸಾಮರ್ಥ್ಯವು ಈ ಗುರುಗಳಲ್ಲಿಯೇ ಸೈ. ಇವರ ಸೇವೆಯೇ ಸರ್ವಸಾಧನವಾಗಿದೆ.

ಈ ಸಂಸಾರವು ಒಂದು, ದಂಡೆಯೇ ಕಾಣದ ಸಮುದ್ರವು; ಸ್ವಭಾವತಃ ಇದರ ನೆಲೆತಳಗಳು ನಿಲುಕದಂತಹವಾಗಿವೆ; ನಾನಾವಿಧ ಪಾಪಗಳೆಂಬ ಮೀನು ಮೊಸಳೆ ಮುಂತಾದ ದುಷ್ಟಹಿಂಸ್ರ ಜಲಚರಗಳಿಂದ ತುಂಬಿ ಹೋಗಿರುವ ಈ ಸಮುದ್ರವು ದಾಟಲು ತುಂಬಾ ದುಸ್ತರವಾಗಿದೆ; ಮತ್ತು ಕಾಮಕ್ರೋಧಾದಿ ಷಡ್ರಿಪುಗಳೆಂಬ ತೆರೆಗಳಿಂದ ಕೂಡಿರುತ್ತದೆ; ಅನೇಕವಿಧ ಭ್ರಮಭ್ರಾಂತಿಗಳ ಭಯಂಕರ ತಿರುಗಣಿಗಳಿಂದ ಸುತ್ತಲ್ಪಟ್ಟು, ಸಂಸಾರಿಯು ಸಿಕ್ಕುಬಿದ್ದು ವಿಲಿವಿಲಿ ಒದ್ದಾಡುತ್ತಿರುವನು ದಂಡೆತಳತೀರಾದಿಗಳೆಂಬುವು ಇವನಿಗೆ ಕಾಣಿಸುವದೇ ಇಲ್ಲ, ಈ ಅಪಾರ ದುಸ್ತರವಾದ ಸಂಸಾರದಲ್ಲಿ. ಅಗಣಿತ ಭಯಭೀತಿ ಸಮೂಹ ಗಳ ಬುರುಗೆದ್ದು, ತೀವ್ರ ದುಃಖವೇದನೆಗಳ ಕಾಲಕೂಟ ವಿಷದಿಂದ ದಂಶಿತ ನಾಗಿ, ಯಾವಾಗಲೂ ಇಂಥ ಸಂಸಾರ ಸಾಗರದಲ್ಲಿ ಮುಳುಗಿ ಮುಂದು

ಕಾಣದೆ ಕಂಗೆಟ್ಟು ಕಂಗಾಲನಾಗಿ ಹೋಗಿದ್ದೇನೆ, ಗುರುವೇ, ನನ್ನನ್ನು ಇದರಿಂದ ಉದ್ಧಾರಮಾಡಬೇಕು ತಾವು!

ರಾಘವೇಂದ್ರ ಗುರುಸ್ತೋತ್ರಂ ಯಃ ಪಠೇದ್ಭಕ್ತಿಪೂರ್ವಕಂ ।
ತಸ್ಯ ಕುಷ್ಠಾದಿ ರೋಗಾಣಾಂ ನಿವೃತ್ತಿಸ್ತ್ವರಯಾ ಭವೇತ್ ॥೨೩॥

ಇವರಾಶ್ರಯದಿಂದ, ರೋಗ ಮಹಾರೋಗಗಳೆಲ್ಲ ಕೂಡಲೇ ಮಾಯವಾಗುವವು

ಈ ಗುರುಸ್ತೋತ್ರವನ್ನು ಒಳ್ಳೇ ಭಕ್ತಿವಿಶ್ವಾಸಗಳಿಂದ ಪಠಿಸುವದರಿಂದ, ಬಿಳುಪು, ಪಾಂಡು, ಕುಷ್ಠಾದಿ ಅಸಾಧ್ಯ ರೋಗಗಳು ಕೂಡ ಕೂಡಲೇ ನಾಶವಾಗಿ ಬಿಡುವವು ಇವರ ಪ್ರಭಾವದಿಂದ

ಅಂಧೋಽಪಿ ದಿವ್ಯದೃಷ್ಟಿಃ ಸ್ಯಾದೇಡಮೂಕೋಽಪಿ ವಾಕ್ಪತಿಃ ।
ಪೂರ್ಣಾಯುಃ ಪೂರ್ಣಸಂಪತ್ತಿಃ ಸ್ತೋತ್ರಸ್ಯಾಸ್ಯ ಜಪಾತ್
ಭವೇತ್ ॥ ೨೪ ॥

ವಾಕ್ಪತಿಗಳೆಂದು ಹೆಸರಾದ ಬೃಹಸ್ಪತಿಯು ದೇವ ಗುರುವು, ಬುದ್ಧಿ, ವಾಗ್ಮಿ, ವಾಗ್ವಿಲಾಸ ಮುಂತಾದವುಗಳಲ್ಲಿ ಅಸದೃಶರಾದವರು ಈ ಸ್ತೋತ್ರವನ್ನು ಏಕಾಗ್ರತೆಯಿಂದ ಜಪಿಸುವದರಿಂದ, ಕುರುಡನು ಕಣ್ಣು ಕಾಣುವವನಾಗಿ, ಒಳ್ಳೇ ದೃಷ್ಟಿಪಡೆಯುವನು; ಕಿವುಡನೂ, ಮೂಕನೂ ಆಗಿರುವವನು ಒಳ್ಳೇ ವಾಕ್ಚತುರನಾಗಿ ವಾಕ್ಪತಿಯಂತಾಗುವನು; ಅಲ್ಲದೆ ದೀರ್ಘಾಯುರಾರೋಗ್ಯ ಸರ್ವಸಂಪದಾದಿ ಸಮೃದ್ಧಿಗಳನ್ನೆಲ್ಲ ಪಡೆಯುವಂಥವನಾಗುತ್ತಾನೆ ಶ್ರೀ ಗುರು ಪ್ರಸಾದದಿಂದ!

ಯಃ ಪಿಬೇಜ್ಜಲಮೇತೇನ ಸ್ತೋತ್ರೇಣೈವಾಭಿಮಂತ್ರಿತಮ್ ।
ತಸ್ಯ ಕುಕ್ಷಿಗತಾ ದೋಷಾಸ್ಸರ್ವೇ ನಶ್ಯಂತಿ ತತ್ಕ್ಷಣಾತ್ ॥೨೫॥

ಶ್ರೀ ಗುರು ಪಾದೋದಕ ಪ್ರೋಕ್ಷಣ ಪ್ರಾಶನಗಳಿಂದ ಹೊಟ್ಟೆಯೊಳಗಿರುವ ರೋಗರುಜಿನದೋಷಗಳು ಕೂಡ ಹೇಳಹೆಸರಿಲ್ಲದೇ ಹೋಗಿಬಿಡುವವು.

ಇವರ ಈ ಸ್ತೋತ್ರ ಪಠಣದಿಂದ ಅಭಿಮಂತ್ರಿಸಲ್ಪಟ್ಟ ಈ ನೀರನ್ನು ಪಾನ ಮಾಡುವದರಿಂದ, ಒಳಗೆ ಉದರಗತ ಬೇನೆ, ದೋಷಪಾಪಾದಿಗಳೆಲ್ಲ ಕ್ಷಣ ಮಾತ್ರದಲ್ಲಿ ಇಲ್ಲದಂತಾಗಿ ಬಿಡುವವು!

ಯತ್ ವೃಂದಾವನಮಾಸಾದ್ಯ ಪಂಗುಃ ಖಂಜೋಽಪಿ ವಾ ಜನಃ ।
ಸ್ತೋತ್ರೇಣಾನೇನ ಯಃ ಕುರ್ಯಾತ್ ಪ್ರದಕ್ಷಿಣ ನಮಸ್ಕೃತೀ ।
ಸಜಂಘಾಲೋಭವೇದೇವ ಗುರುರಾಜ ಪ್ರಸಾದತಃ ॥ ೨೬ ॥

ಕುಂಟ ಹೆಳವರಾವರೂ ಕೂಡಾ ಈ ಸ್ತೋತ್ರಪಠಿಸುತ್ತ ಶ್ರೀಗುರುಗಳಿಗೆ ನಮಸ್ಕಾರ ಪ್ರದಕ್ಷಿಣೆಮಾಡುವದರಿಂದ ಅನುಗೃಹೀತರಾಗಿ ಒಳ್ಳೇಕಾಲುಗಳು ಳ್ಳವರಾಗುವರು.

ಹೆಳವನಾಗಲೀ, ಕುಂಟನಾಗಲೀ, ಇವರ ವೃಂದಾವನವನ್ನಾಶ್ರಯಿಸಿ ಈ ಸ್ತೋತ್ರಪಠಿಸುತ್ತ ಪ್ರದಕ್ಷಿಣೆ ನಮಸ್ಕಾರ ಮಾಡುವದರಿಂದ, ಶ್ರೀ ಗುರ್ವಾನುಗ್ರಹ ಪ್ರಸಾದದಿಂದ, ಸರಿಯಾದ ಒಳ್ಳೇ ಕಾಲುಗಳುಳ್ಳವರಾಗುವದರಲ್ಲಿ ಸಂದೇಹವಿಲ್ಲ.

ಸೋಮಸೂರ್ಯೋಃ ಪರಾಗೇ ಚ ಪುಷ್ಯಾರ್ಕಾದಿ ಸಮಾಗಮೇ ।
ಯೋನುತ್ತಮಮಿದಂ ಸ್ತೋತ್ರಂ ಅಷ್ಟೋತ್ತರ ಶತಂ ಜಪೇತ್ ।
ಭೂತಪ್ರೇತ ಪಿಶಾಚಾದಿ ಪೀಡಾ ತಸ್ಯ ನ ಜಾಯತೇ ॥ ೨೭ ॥

ಪರ್ವಕಾಲದಲ್ಲಿ ಈ ದಿವ್ಯಸ್ತೋತ್ರವನ್ನು ಭಕ್ತಿಯಿಂದ ೧೦೮ ಸಲ ಜಪಿಸುವದರಿಂದ ಭೂತ ಪ್ರೇತ ಪಿಶಾಚಾದಿ ಪೀಡೆಯು ಉಂಟಾಗಲಾರದು.

ಸೂರ್ಯಗ್ರಹಣ, ಚಂದ್ರಗ್ರಹಣ, ಪುಷ್ಯ ನಕ್ಷತ್ರದ ಭಾನುವಾರ, ಮುಂತಾದ ಶುಭದಿನಗಳ ಪರ್ವಕಾಲದಲ್ಲಿ ಈ ದಿವ್ಯ ಸ್ತೋತ್ರವನ್ನು ೧೦೮ ಬಾರಿ ಜಪಿಸಿದರೆ ಭೂತ ಪ್ರೇತ ಪಿಶಾಚಾದಿ ಅನಿಷ್ಟ ಬಾಧೆಪೀಡೆಗಳು ಸೋಂಕಲಾರವು ಭಕ್ತ ಜನಗಳಿಗೆ.

ಏತತ್ ಸ್ತೋತ್ರಂ ಸಮುಚ್ಚಾರ್ಯ ಗುರೋರ್ವೃಂದಾವನಾಂತಿಕೇ ।
ದೀಪಸಂಯೋಜನಾತ್ ಜ್ಞಾನಂ ಪುತ್ರಲಾಭೋ
ಭವೇತ್ ಧ್ರುವಮ್ ॥ ೨೮ ॥

ಈ ಗುರುಸ್ತೋತ್ರ ಪಠಣ ಪ್ರಭಾವದಿಂದ, ಪುತ್ರಲಾಭವಾಗುತ್ತದೆ ಭಕ್ತನಿಗೆ

ಶ್ರೀ ಗುರುಗಳ ವೃಂದಾವನ ಸನ್ನಿಧಿಯಲ್ಲಿ, ಸ್ತೋತ್ರವನ್ನು ತಪ್ಪುತಡೆಗಳಿಲ್ಲದೆ ಪಠಿಸಿ, ದೀಪ ಹಚ್ಚುವದರಿಂದ, ಪುತ್ರಪ್ರಾಪ್ತಿಯಾಗುವದರಲ್ಲಿ ಸಂಶಯವಿಲ್ಲ.

ಪರವಾದಿಜಯೋದಿವ್ಯಜ್ಞಾನಭಕ್ತ್ಯಾದಿ ವರ್ಧನಂ ।
ಸರ್ವಾಭೀಷ್ಟ ಪ್ರವೃದ್ಧಿಃ ಸ್ಯಾನ್ನಾತ್ರ ಕಾರ್ಯಾ ವಿಚಾರಣಾ ॥ ೨೯ ॥

ಈ ಸ್ತೋತ್ರಮಹಿಮೆಯಿಂದ, ಕುಮತ ಕುಸಿದ್ಧಾಂತಗಳನ್ನು ವಾದಿಸುವ ಪ್ರತಿವಾದಿಗಳನ್ನು ಗೆಲ್ಲುವ ಸಾಮರ್ಥ್ಯವುಳ್ಳವನಾಗುತ್ತಾನೆ, ಭಕ್ತನು ಅವನಿಗೆ ದಿವ್ಯದೃಷ್ಟಿ, ಸದ್ಭಕ್ತಿಗಳು ಸಿದ್ಧಿಸಿ, ಹೆಚ್ಚುತ್ತ, ಅವನ ಬೇಕುಬಯಕೆಗಳೆಲ್ಲವೂ ಕೈಗೂಡುವಂತಹವುಗಳಾಗುತ್ತವೆ ಇದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ.

ರಾಜಚೋರಮಹಾವ್ಯಾಘ್ರ ಸರ್ಪನಕ್ರಾದಿ ಪೀಡನಂ ।
ನ ಜಾಯತೇ ಅಸ್ಯಸ್ತೋತ್ರಸ್ಯ ಪ್ರಭಾವಾನ್ನಾತ್ರ ಸಂಶಯಃ ॥ ೩೦ ॥

ರಾಜಭಯ, ಚೋರಭಯ ಘೋರವ್ಯಾಘ್ರಾದಿ ಹಿಂಸ್ರಭಯ, ಹಾವು ಮೊಸಳೆಗಳ ಭಯ, ಮುಂತಾದ ಪರಭಯಗಳಿಂದ ಪೀಡೆಯಾಗಲಾರದು ಭಕ್ತನಿಗೆ ಸ್ತೋತ್ರ ಪ್ರಭಾವದಿಂದ.

ಈ ಸ್ತೋತ್ರ ಮಹಿಮೆಯಿಂದ ಭಕ್ತನಿಗೆ, ರಾಜಭಯ, ಚೋರಭಯ, ವ್ಯಾಘ್ರಾದಿ ಹಿಂಸ್ರಪಶುಭಯ, ಹಾವು ಮೊಸಳೆಭಯ ಮುಂತಾದ ಪರಭಯಗಳಿಂದುಂಟಾಗುವ ಪೀಡೆಬಾಧೆಗಳು ಉಂಟಾಗಲಾರವು ನಿಜವಾಗಿಯೂ.

ಯೋಭಕ್ತ್ಯಾ ಗುರುರಾಘವೇಂದ್ರಚರಣದ್ವಂದ್ವಂ ಸ್ಮರನ್ ಯಃ ಪಠೇತ್ ।
ಸ್ತೋತ್ರಂ ದಿವ್ಯಮಿದಂ ಸದಾ ನ ಹಿ ಭವೇತ್ತಸ್ಯಾಸುಖಂ ಕಿಂಚನ ॥

ಕಿಂಚ್ವಿಷ್ಟಾರ್ಥ ಸಮೃದ್ಧಿರೇವ ಕಮಲಾನಾಥಪ್ರಸಾದೋದಯಾತ್
ಕೀರ್ತಿರ್ದಿಗ್ವಿದಿತಾ ವಿಭೂತಿರತುಲಾ
"ಸಾಕ್ಷೀಹಯಾಸ್ಯೋತ್ರ ಹಿ" ॥ ೩೧ ॥

ಶ್ರೀ ಗುರ್ವನುಗ್ರಹವೇ ಶ್ರೀಹರಿಯ ಅನುಗ್ರಹಕ್ಕೆ ಸೋಪಾನವು ಶ್ರೀ ಗುರುಪ್ರಸಾದದಿಂದ ಜ್ಞಾನ ಉಂಟಾಗಿ, ಪರಮಾತ್ಮನ ಸಿದ್ಧಿಯಾಗಿ ಕೊನೆಗೆ ಮೋಕ್ಷಪ್ರಾಪ್ತಿಯಾಗುವದುಂಟು

ಶ್ರೀ ಅಪ್ಪಣ್ಣಾಚಾರ್ಯರು ಶ್ರೀ ಗುರುಗಳ ಸನ್ನಿಧಿಯಲ್ಲಿ ಈ ಗುರು ಸ್ತೋತ್ರವನ್ನು "ಕೀರ್ತಿರ್ದಿಗ್ವಿದಿತಾ ವಿಭೂತಿರತುಲಾ . . . . . . . ಈವರೆಗೆ ರಚಿಸಿ ಅನ್ನುತ್ತಿರಲು, ಕೊಂಚ ಸಂಶಯ ಸಂಕೋಚ ಉಂಟಾದಂತಾಗಿ, ನಿಂತುಬಿಟ್ಟರು ಕೂಡಲೇ ವೃಂದಾವನದೊಳಗಿಂದ ಶ್ರೀಗಳು ಮೆಚ್ಚಿ "ಸಾಕ್ಷೀಹಯಾಸ್ಯೋತ್ರ ಹಿ" ಎಂಬ ಉತ್ತರಪದವನ್ನು ಛಂದೋಬದ್ಧವಾಗಿ ನುಡಿದು ಗುರುಸ್ತೋತ್ರವನ್ನು ಪೂರ್ಣಗೊಳಿಸಿದರು ಈ ಗುರು ಸ್ತೋತ್ರಕ್ಕೆ ತಾವೇ ಸಾಕ್ಷಿಭೂತರಾಗಿ ನಿಂತುಕೊಂಡು ಫಲಪ್ರಾಪ್ತಿಯನ್ನು ಇದುವರೆಗೆ ಭಕ್ತಜನಗಳಿಗೆ ಚಾಚೂ ತಪ್ಪದೆ ನೀಡಿ ನಡೆಸುತ್ತಿದ್ದಾರೆ

ನಿಜಭಕ್ತಿವಿಶ್ವಾಸಗಳಿಂದ, ಶ್ರೀಗುರು ರಾಘವೇಂದ್ರರ ಚರಣಯುಗವನ್ನು ಸ್ಮರಿಸುವವನಿಗೆ ಇದನ್ನು ಪಠಿಸುವವನಿಗೆ, ಎಂದೆಂದಿಗೂ ಸುಖವೇ ಸುಖವಾಗಿ ಲವಲೇಶಕೂಡಾ ದುಃಖ ಉಂಟಾಗಲಾರದು ಅದಲ್ಲದೆ ಶ್ರೀರಮಣನ ದಿವ್ಯಾನುಗ್ರಹದಿಂದ ತನ್ಮೂಲಕ ಇಷ್ಟಾರ್ಥ ಸಿದ್ಧಿಯಾಗಿ, ದಿಗಂತಕೀರ್ತಿ ಬೆಳೆಯುತ್ತ, ಸರ್ವ ಋದ್ಧಿಸಿದ್ಧಿಸಮೃದ್ಧಿಗಳುಂಟಾಗಿ, ಸಂಖ್ಯೆ ಇಲ್ಲದ ಸಂಪತ್ತು ಅವನಿಗೆ ಉಂಟಾಗುವವು. ಇದಕ್ಕೆಲ್ಲ ಸಾಕ್ಷಿಯಾಗಿರುವ ಶ್ರೀ ಹಯವದನನಾದ ಶ್ರೀ ಹರಿಯೇ ಪ್ರಮಾಣನು

ಇತಿ ಶ್ರೀ ರಾಘವೇಂದ್ರಾರ್ಯ ಗುರುರಾಜ ಪ್ರಸಾದತಃ ।
ಕೃತಂ ಸ್ತೋತ್ರಮಿದಂ ಪುಣ್ಯಂ ಶ್ರೀಮದ್ಭಿರಪ್ಪಣಾಭಿಧೈಃ ॥೩೨॥

ಈ ಮೇರೆಗೆ ಶ್ರೀ ಗುರುಪುಂಗವರಾದ ಶ್ರೀ ರಾಘವೇಂದ್ರಸ್ವಾಮಿಗಳ ಅನುಗ್ರಹದಿಂದ ಜ್ಞಾನಶೀಲರೂ ಗುರ್ವಾನುಗ್ರಹಪಡೆದವರೂ ಆದ ಅಪ್ಪಣ್ಣಾಚಾರ್ಯರಿಂದ ಈ ದಿವ್ಯಪಾವನ ಸ್ತೋತ್ರವು ರಚಿಸಲ್ಪಟ್ಟಿರುತ್ತದೆ.



# ಶ್ರೀ ಲಘು ರಾಘವೇಂದ್ರ ಸ್ತುತಿಯು.

ಪೂಜ್ಯಾಯ ರಾಘವೇಂದ್ರಾಯ ಸತ್ಯಧರ್ಮರತಾಯ ಚ ।
ಭಜತಾಂ ಕಲ್ಪವೃಕ್ಷಾಯ ನಮತಾಂ ಕಾಮಧೇನವೇ ॥ ೧ ॥

ವೇದೋಕ್ತ ಸದ್ಧರ್ಮವಾದ ಶ್ರೀ ವೈಷ್ಣವ ಧರ್ಮದಲ್ಲಿ ಆಸಕ್ತಿ ಉಳ್ಳವರಾಗಿ, ಈ ಗುರುಗಳು, ಕಾಮಧೇನು ಕಲ್ಪವೃಕ್ಷಗಳಂತೆ, ಭಕ್ತಾದಿಗಳು ಬಯಸಿ ಬೇಡಿದ ಬಯಕೆಗಳನ್ನು ನೀಡುವವರಲ್ಲಿ ತುಂಬಾ ಸಮರ್ಥರು

ಸದ್ಧರ್ಮದಲ್ಲಿ ಆಸಕ್ತಿಯುಳ್ಳವರೂ, ಭಜಿಸುವವರಿಗೆಲ್ಲ ಕಲ್ಪವೃಕ್ಷದೋಪಾದಿಯಲ್ಲಿಯೂ, ನಮಿಸುವವರಿಗೆಲ್ಲ ಕಾಮಧೇನುವಿನೋಪಾದಿಯಲ್ಲಿಯೂ, ಇರುತ್ತಿರುವ ಪೂಜ್ಯರಾದ ಈ ಗುರುರಾಘವೇಂದ್ರರಿಗೆ ನಮಸ್ಕಾರವು.

ಶ್ರೀ ಸುಧೀಂದ್ರಾದಿ ಸಂಭೂತಾನ್ ರಾಘವೇಂದ್ರ ಕಲಾನಿಧೀನ್ ।
ಸೇವೇ ಸುಜ್ಞಾನ ಸೌಖ್ಯಾರ್ಥಂ ಸಂತಾಪತ್ರಯ ಶಾಂತಯೇ ॥ ೨ ॥

ಶ್ರೀ ಸುಧೀಂದ್ರ ತೀರ್ಥರಿಗೆ ಶ್ರೀ ಮೂಲ ರಾಮಚಂದ್ರಾನುಗ್ರಹದಿಂದ ಈ ಶ್ರೀ ರಾಘವೇಂದ್ರ ತೀರ್ಥರೆಂಬ ದೇವಾಂಶರೂ ಸಚ್ಛಿಷ್ಯರೂ ಲಭಿಸಿದರು.

ಶ್ರೀ ಸುಧೀಂದ್ರ ತೀರ್ಥರೆಂಬ ಸಾಗರದಿಂದ ಹುಟ್ಟಿ (ಸಮುದ್ರಮಂಥನದಿಂದ ಚಂದ್ರಾದಿ ೧೪ ರತ್ನಗಳು ಉದ್ಭರಿಸಿಬಂದಂತೆ) ಚಂದ್ರನಂತೆ ಆಹ್ಲಾದದಾಯಕರಾದಂಥ ಶ್ರೀ ರಾಘವೇಂದ್ರರೆಂಬ ಚಂದ್ರರನ್ನು ಸುಜ್ಞಾನ ಸುಸುಖ ಪ್ರಾಪ್ತಿಗೂ ಹಾಗು ತಾಪತ್ರಯಗಳ ಶಾಂತಿಗೂ ನಾನು ಸೇವಿಸಿ ಆರಾಧಿಸುತ್ತೇನೆ.

ಅಘಂ ದ್ರಾವಯತೇ ಯಸ್ಮಾತ್ ವೇಂಕಾರೋವಾಂಛಿತಪ್ರದಃ ।
ರಾಘವೇಂದ್ರ ಯತಿಸ್ತಸ್ಮಾತ್ ಲೋಕೇ ಖ್ಯಾತೋಭವಿಷ್ಯತಿ ॥ ೩ ॥

ರಾಘವೇಂದ್ರರೆಂಬ ಹೆಸರು ಕೂಡಾ ಮಹಾ ಮಹಿಮೆಯುಳ್ಳದ್ದಾಗಿದೆ.

## ಶ್ರೀ ರಾಘವೇಂದ್ರಾಯ ನಮಃ

"ಶ್ರೀ" ಅಂದರೆ ಸುಜ್ಞಾನ, "ರಾ" ಅಂದರೆ ರಾಜಸ್ತ್ರೀಭಿಮಾದಿಗಳು ವಶ, "ಘ" ಅಂದರೆ ಘನಶಕ್ತಿಸಾಮರ್ಥ್ಯಗಳು, "ವೇ" ಅಂದರೆ ವೇದಶಾಸ್ತ್ರಾನ್ವಿತ, "ಂದ್ರಾ" ಅಂದರೆ ದ್ರವ್ಯಾದಿ ವಶ, "ಯ" ಅಂದರೆ ಯಶಪ್ರಾಪ್ತಿ, "ನ" ಅಂದರ ಅನವರತವೂ, "ಮಃ" ಅಂದರ ಮನೋನಿಷ್ಠತೆ ಹೀಗೆ "ಶ್ರೀ ರಾಘವೇಂದ್ರಾ ಯನಮಃ" ಈ ದಿವ್ಯ ಮಂತ್ರವನ್ನು ಜಪಿಸುವದರಿಂದಲೂ, ಭಜಿಸುವದ ರಿಂದಲೂ, ಧ್ಯಾನಿಸುವದರಿಂದಲೂ ಭಕ್ತನಿಗೆ ಸುಜ್ಞಾನ ಉಂಟಾಗಿ, ಧನ ಕನಕಪುತ್ರಮಿತ್ರಕಲತ್ರಾದಿ ಸಮಸ್ತ ಸಂಪದಾಭಿವೃಧ್ಧಿಯಾಗುತ್ತ ಹೋಗು ತ್ತದೆ, ಈ ಮಹಾನುಭಾವರ ಮಹಿಮಾ ವಿಶೇಷದಿಂದ!

ನಮ್ಮೆಲ್ಲರ ಪಾಪಗಳನ್ನೆಲ್ಲ ನಾಶಪಡಿಸುವದರಿಂದ (ಅಘಂದ್ರಾಪಯಾ) ಮನೋಭೀಷ್ಟಗಳನ್ನೆಲ್ಲ ದಯಪಾಲಿಸುವದರಿಂದ, (ವೇಂಕಾರೋವಾಂಛಿತ ಪ್ರದಃ) ಈ ಗುರುಗಳು ಈ ಲೋಕದಲ್ಲೆಲ್ಲ ರಾಘವೇಂದ್ರ ಸ್ವಾಮಿಗಳೆಂದು ಸುಪ್ರಸಿದ್ಧಿ ಪಡೆದಿರುವರು

ದುರ್ವಾದಿಧ್ವಾಂತರವಯೇ ವೈಷ್ಣವೇಂದೀವರೇಂದವೇ ।
ಶ್ರೀ ರಾಘವೇಂದ್ರ ಗುರವೇ ನಮಃ ಕಾರುಣ್ಯಸಿಂಧವೇ ॥ ೪ ॥

ವೈಷ್ಣವ ಪ್ರಪಂಚಕ್ಕೆಲ್ಲ ಈ ಯತೀಶ್ವರರು ಒಳ್ಳೇ ಬೆಳಕುಬೀರಿ, ಉಲ್ಲಾಸಾನಂದಗಳನ್ನು ನೀಡುವವರಾಗಿದ್ದಾರೆ

ಕುವಾದಗಳನ್ನು ವಾದಿಸುವ ದುರ್ವಾದಿಗಳೆಂಬ ಕತ್ತಲೆಗೆ ಸೂರ್ಯನಂತೆ ತೇಜಃಪುಂಜರಾಗಿರುವ, ವೈಷ್ಣವಸ್ವಂದವೆಂಬ ಕಮಲಗಳಿಗೆಲ್ಲ ಚಂದ್ರನಂತೆ ಆಹ್ಲಾದದಾಯಕರಾಗಿರುವ, ಕರುಣಾಸಮುದ್ರರಾಗಿರುವ, ಈ ರಾಘವೇಂದ್ರ ಗುರುಗಳಿಗೆ ನಮಸ್ಕಾರಗಳು

**ವ್ಯಾಸೇನವ್ಯುಪ್ತಬೀಜಃ ಶ್ರುತಿಭುವಿಭಗವತ್ಪಾದಲಬ್ಧಾಂಕುರ ಶ್ರೀಃ ।**
**ಪ್ರತ್ನೈಃ ಈಷತ್ಪ್ರಭಿನ್ನೋಽಜನಿಜಯಮುನಿನಾ ಸಮ್ಯಗುದ್ಭಿನ್ನಶಾಖಃ ।**

ಮೌನೀಶವ್ಯಾಸರಾಜಾತ್ ಉದಿತಕಿಸಲಯಃ ಪುಷ್ಪಿತೋ
(ಪೂರ್ಣಿತೋ)ಽಯಂ ಜಯೀಂದ್ರಾತ್ |
ಅದ್ಯ ಶ್ರೀ ರಾಘವೇಂದ್ರಾತ್ ವಿಲಸತಿ ಫಲಿತೋಮಧ್ವಸಿದ್ಧಾಂತ
ಶಾಖೀ || ೫ ||

ಶ್ರೀ ವೈಷ್ಣವ ಸಿದ್ಧಾಂತಸ್ಥಾಪನಾಚಾರ್ಯರಲ್ಲಿ, ಕಲ್ಪವೃಕ್ಷ ಕಾಮಧೇನು ಚಿಂತಾಮಣಿ ಸದೃಶರಾದ,

ಶ್ರೀಮ ಧ್ವಃ ಕಲ್ಪವೃಕ್ಷಸ್ತು ಜಯಾಚಾರ್ಯಸ್ತು ಧೇನವಃ |
ಚಿಂತಾಮಣಿಸ್ತು ವ್ಯಾಸಾರ್ಯಃ ಮುನಿತ್ರಯಂ ಉದಾಹೃತಂ ||
(ಶ್ರೀ ಮುಷ್ಣ ಮಹಾತ್ಮ್ಯ)

ಶ್ರೀಮಧ್ವಾಚಾರ್ಯರು ಶ್ರೀಜಯತೀರ್ಥರು (ಶ್ರೀಮಟ್ಟೀಕಾಕೃತ್ಪಾದರು) ಹಾಗೂ ಶ್ರೀ ವ್ಯಾಸರಾಯರು, ಈ ತ್ರಯರು ಪ್ರಸಿದ್ಧರಾಗಿದ್ದಾರೆ ಇಂತಹ ವೈಷ್ಣವಸಿದ್ಧಾಂತ ವೃಕ್ಷವು ಈ ಸಮಸ್ತ ಗುರುಗಳಿಂದ ವಿಕಾಸಗೊಂಡು ಫಲ ವಹಾ ಗಿ ಕಂಗೊಳಿಸುತ್ತಿರುತ್ತದೆ

ವೇದಗಳೆಂಬ ನೆಲದಲ್ಲಿ, ಮೊದಲಿಗೆ ಶ್ರೀ ವೇದವ್ಯಾಸರು ಬೀಜ ನೆಟ್ಟು ಬಿತ್ತಿದವರು. ಅದು ಅಂಕುರವಾಗಿ, ಶ್ರೀಮಧ್ವಾಚಾರ್ಯರಿಂದ ತಮ್ಮ ಮೂಲ ೩೭ ಗ್ರಂಥ ಹಾಗು ಭಾಷ್ಯಾದಿಗಳ ಪರಿಶ್ರಮವಾಗಿ ಮೊಳಕೆ ಒಡೆಯಹತ್ತಿ ಮೇಲ್ಮುಖಮಾಡಿ ಎಲ್ಲರ ಲಕ್ಷ್ಯವನ್ನು ತನ್ನ ಕಡೆಗೆ ಸೆಳೆಯಹತ್ತಿತು. ಮುಂದೆ ಶ್ರೀ ಟೀಕಾಚಾರ್ಯರ ತತ್ವಪ್ರಕಾಶಿಕಾದಿ ಟೀಕೆಟಿಪ್ಪಣಿಗಳಿಂದ, ಅದಕ್ಕೆ ಟೊಂಗೆರೆಂಬೆಗಳು ಸ್ಫುಟವಾಗಿ ಉಂಟಾಗಹತ್ತಿದವು. ಯತಿಶ್ರೇಷ್ಠರಾದ ಶ್ರೀ ವ್ಯಾಸರಾಯರಿಂದ, ಅವುಗಳಿಗೆಲ್ಲ ಚಿಗುರೆಲೆಗಳು ಹುಟ್ಟಿ ಕಾಣಿಸಿಕೊಳ್ಳ ಹತ್ತಿದವು. ಆಮೇಲೆ ಶ್ರೀ ವಿಜಯೀಂದ್ರತೀರ್ಥರ ಪ್ರಯತ್ನವಾಗಿ ಆ ಎಲ್ಲ ಎಲೆ ಗಳು ಗುಂಪುಗುಂಪಾಗಿ ಪೂರ್ಣಗೊಳ್ಳತೊಡಗಹತ್ತಿದವು. ಈಗ ಶ್ರೀ ರಾಘ ವೇಂದ್ರತೀರ್ಥರಿಂದ, ಅವರ ಪರಿಮಳ, ಗೀತಾವಿವೃತ್ಯಾದಿ ಸುಮಾರು ೫೦ರಷ್ಟು ಗ್ರಂಥಗಳ ಪುಷ್ಪಾವೃನ್ನದಿಂದ, ಅದೊಂದು ದೊಡ್ಡ ಮರವಾಗಿ ವೈಷ್ಣವಸಿದ್ಧಾಂತ ವೃಕ್ಷವಾಗಿ, ಫಲಿಸಿ, ಕಾಯಿ ಹಣ್ಣುಗಳಿಂದ ಪರಿಪೂರ್ಣಗೊಂಡು, ಒಳ್ಳೇ ರಮಣೀಯವಾಗಿ ಕಂಗೊಳಿಸಹತ್ತಿದೆ.

# ಫಲಶ್ರುತಿ.

ಇವರ ವೃಂದಾವನ ಗತವೃತ್ತಿಕೆಯ ನಿತ್ಯ ಸೇವನೆಯಿಂದ, ಪಾಪ ಪಾತಕಗಳೆಲ್ಲ ಇಲ್ಲದಂತಾಗುವವು ಅವನ್ನು ಮೈಗೆ ಲೇಪಿಸಿಕೊಳ್ಳುವವರಿಂದ, ರೋಗ ಮಹಾ ರೋಗಾದಿಗಳು ಕೂಡಾ ನಶಿಸಿ ಹೋಗುವವು ಭೂತಪ್ರೇತ ಪಿಶಾಚಾದಿ ಭಯಪೀಡೆಗಳಂತೂ ಹೇಳಹೆಸರಿಲ್ಲದೇ ಹೋಗಿಬಿಡುವವು

ಇವರ ಪಾದೋದಕ ಪ್ರೋಕ್ಷಣೆ ಪಾನಗಳೆಂದರೆ ಭಕ್ತನಿಗೆ, ಮುಕ್ತಿಗೆ ಸೋಪಾನ ಸಮನಾದುದು. ಇಂಥವರ ಸಂದರ್ಶನ ಲಾಭವಾಯಿತೆಂದರೆ, ಭಕ್ತನಿಗೆ ತಾಪ, ಸಂತಾಪ, ಪಾಪಾದಿಗಳೆಲ್ಲವುಗಳ ಉಚ್ಚಾಟನೆಯೇ ಅನ್ನ ಬಹುದು ಇಂತಹ ಶರಣ ಸಂಜೀವರ ಹಿರಿಮೆಯನ್ನು ಎಷ್ಟು ಹೊಗಳಿದರೂ ಎಷ್ಟು ಕೊಂಡಾಡಿದರೂ ಸಾಲದು

ಕುಂದದೆ ವರಮಂತ್ರಾಲಯದಲ್ಲಿರುವ। ಕರೆದಲ್ಲಿಗೆ ಬರುವ।
ಸಂದರುಶನಮಾತ್ರದಿ ಮಹಾಪಾಪಾ। ಪರಿದೋಡಿಸಲಾಪಾ।
ವೃಂದಾವನಗತ ವೃತ್ತಿಗೆ ಜಲಪಾನಾ। ಮುಕ್ತಿಗೆ ಸೋಪಾನಾ।
ಮಂದಭಾಗ್ಯರಿಗೆ ದೊರೆಯದಿವರ ಸೇವಾ। ಶರಣರ ಸಂಜೀವಾ॥
ರಾಘವೇಂದ್ರ ಗುರುರಾಯರ ಸೇವಿಸಿರೋ। ಸೌಖ್ಯದಿ
ಜೀವಿಸಿರೋ॥
( ಶ್ರೀದವಿಠ್ಠಲರು )

ಶ್ರೀ ರಾಯರ ವಿವಿಧ ವಿಲಕ್ಷಣ ಮಹಿಮಾತಿಶಯಗಳನ್ನೆತ್ತಿ ತೋರಿಸಿದ ಒಂದು ದಾಸರ ಕೀರ್ತನೆ

[ ಈ ಕೀರ್ತನೆಯ ಬಲಬದಿಯ ಅಂಕಿಗಳು ಆ ಆ ಅಂಕಿಗಳ ಪವಾಡ ಗಳನ್ನೇ ಒತ್ತಿ ಆಧಾರವಾಗಿ ತೋರಿಸುತ್ತವೆಂದು ಇವನ್ನು ಗುರ್ತಿಸಲಾಗಿದೆ ]

-ಆದಿತಾಳ

ರಾಘವೇಂದ್ರ। ರಾಜಿತ ಗುಣಸಾಂದ್ರ
ರಾಘವೇಂದ್ರ ಗುರುರಾಯ ಘೋರಪಾ
ಪೌಘಗಳೆಣಿಸದೆ ಪಾಲಿಸು ಬಿಡದೆ

ಭೃತ್ಯಗೆ ಬಂದಪಮೃತ್ಯು ಕಳೆದು ಸುಖ
ವಿತ್ತು ಪೊರೆದ ಪುರುಷೋತ್ತಮದಾಸ ॥ ೨ ॥

ಬಿಸಿಲಿಂದಳುವಾ ಶಿಶುವಿಗೆ ಚೈಲಾ
ಗಸದಲಿ ನಿಲಿಸಿದ್ಯೋ ಅಸಮ ಮಹಿಮನೆ ॥ ೩ ॥

ಕನಲಿದ ಜನಪನ ಅನುನಯದಲಿ ನಿ
ಷ್ಕಣುಗನ ಮಾಡಿದಿ ಘನತರ ಚರಿತ ॥ ೪ ॥

ಚೂತಫಲರಸದಿ ಪೋತ ಮುಳುಗೆ ಮೃತ್ಯು
ಭೀತಿ ಬಿಡಿಸಿದ ಅನಾಥರಕ್ಷಕ ॥ ೫ ॥

ಮಳಲ ಮಾರ್ಗದೊಳು ಲಲನೆ ಪ್ರಸೂತಿಸೆ
ಪುಲಿನ ಕಮಂಡಲದೊಳು ಜಲ ತೋರ್ದೆ ॥ ೬ ॥

ಕ್ಷಿಪ್ರದಿ ತೋರಿದಿ ವಿಪ್ರರ ಮಹಿಮೆಯ
ಆ ಪೃಥಿವೀಶಗೆ ಅಪ್ರತಿ ಗುರುವೆ ॥ ೭ ॥

ಹುತವಹಗುಣಿಸಿದ ರತನ ಮಾಲಿಕೆಯ
ಕ್ಷಿತಿಪಗೆ ತಂದಿತ್ತತುಳ ಮಹಿಮನೆ ॥ ೮ ॥

ಪ್ರಕಟಿಸಿ ತೋರಿದಿ ಮುಕುತಿಯ ಬೇಡಿದ
ಭಕುತನ ಯೋಗ್ಯತೆ ನಿಖಿಳ ಜನರಿಗೆ ॥ ೯ ॥

ಪತಿತನ ನಿಜಯೋಗ್ಯತೆಯನರಿತು ಸ
ದ್ಗತಿಯ ಪಾಲಿಸಿದೆ ಯತಿಕುಲವರ್ಯ ॥ ೧೦ ॥

ದ್ವಾದಶ ವರ್ಷಾನ್ನೋದಕ ಸಲಿಸಿದೆ
ಮೋದಿಸಿ ಪತಿಗೆ ಮಹಾದಯವಂತ ॥ ೧೧ ॥

ಸಾದರದಲಿ ಹಸ್ತೋದಕ ಕೊಡಲು ನಿ
ಷೇಧ ಗೈಯದೆ ನಿವೇದಿಸೆ ಹರಿಗೆ ॥ ೧೨ ॥

ಪಾದೋದಕವ ದಿನೇದಿನೆ ಸೇವಿಪ
ಸಾಧುಗಳಾಧಿಗಳಿರದೆ ನೀಸಳಿವ ॥ ೧೩ ॥

ಯತಿವರ ದೂರದಿ ವೃತಗೈಯಲಾಗಸ
ಪಥದಲಿ ಕಂಡು ನುತಿಸಿದ ಮಹಿಮ ॥ ೧೪ ॥

ವಿಪಿನದಿ ಚಂಡಾತಪದಿ ಬೆಂದ ಕಾ
ಶ್ಯಪಿಸುತನುಳುಹಿದ ಕೃಪಣ ಜನಾತ್ರ ॥ ೧೫ ॥

ಅನಿವೇದಿತ ಭೋಜನ ವಸ್ತುಗಳಂ
ಪನುಭವ ಮಾಡಿಸಿದನುಪಮ ಚರಿತ ॥ ೧೬ ॥

ಭಾಷಾತ್ರಯಯುತ ವ್ಯಾಸೋಕ್ತಿಗಳ ಪ್ರ
ಕಾಶವಗೈಸಿದ ಭೂಸುರವಿನುತ ॥ ೧೭ ॥

ದಾತ ಗುರು ಜಗನ್ನಾಥ ವಿಠಲನ
ದೂತನೆ ಮಂತ್ರನಿಕೇತನ ನಿಲಯ ॥ ೧೮ ॥

---



# ಶ್ರೀಮದ್ರಾಘವೇಂದ್ರ ಮಂಗಲಾಷ್ಟಕವು

## ( ಶ್ರೀ ಗುರುರಾಜಾಷ್ಟಕವು )

ಶ್ರೀಮದ್ರಾಮಪದಾರವಿಂದಮಧುಪಃ ಶ್ರೀಮಧ್ವವಂಶಾಧಿಪಃ ।
ಸಚ್ಛಿಷ್ಯೋಡುಗಣೋಡುಪಃ ಶ್ರಿತಜಗದ್ಗೀರ್ವಾಣ ಸತ್ಪಾದಪಃ ।
ಅತ್ಯರ್ಥಂ ಮನಸಾಕೃತಾಚ್ಯುತಜಪಃ ಪಾಪಾಂಧಕಾರಾತಪಃ ।
ಶ್ರೀಮತ್ಸದ್ಗುರು ರಾಘವೇಂದ್ರ ಯತಿರಾಟ್ ಕುರ್ಯಾತ್ ಧ್ರುವಂ
ಮಂಗಲಂ ॥ ೧ ॥

ಶ್ರೀಮದ್ರಾಮಚಂದ್ರ ಪಾದಕಮಲದೊಳಗೆ ಮನಸೋತು, ಮಕರಂದಾನಂದವನ್ನು ಪಡೆಯುವ ಮಧುಕರರಾಗಿರುವವರು, ಶ್ರೀಮದ್ವೈಷ್ಣವ ವಂಶದೊಳಗೆ ಮುಖ್ಯರೆನಿಸಿಕೊಳ್ಳುವಂಥವರು, ಶ್ರೀಮಧ್ವಾಚಾರ್ಯರ ಶಿಷ್ಯ ( ಮಾಧ್ವರು )ರೆಂಬ ತಾರಾಗಣಗಳ ಮಧ್ಯದಲ್ಲಿ ಚಂದ್ರನೋಪಾದಿಯಲ್ಲಿ ಪ್ರಕಾಶಿಸಿ ಶೋಭಾಯಮಾನರಾಗಿ ಮೆರೆಯುತ್ತಿರುವಂಥವರು, ಸುಸಂಸ್ಕೃತ ಸಾಹಿತ್ಯ ವನದಲ್ಲಿ, ಆಶ್ರಿತ ಭಕುತರಿಗೆಲ್ಲ ಒಳ್ಳೇ ಆಶ್ರಯವೃಕ್ಷದಂತಿರುವವರು, ಒಳ್ಳೇ ಮನೋಮಯತೆಯಿಂದಲೂ, ತುಂಬಾ ಪರಾಕಾಷ್ಠೆಯಿಂದಲೂ, ಶ್ರೀಹರಿಯ ಧ್ಯಾನಜಪತಪಾದಿಗಳನ್ನು ಆಚರಿಸಿದಂಥವರು ಆಧ್ಯಾತ್ಮಿಕ ಆಧಿದೈವಿಕ ಮತ್ತು ಆಧಿಭೌತಿಕ ತ್ರಿವಿಧ, ಪಾಪಗಳೆಂಬ ಕತ್ತಲೆಗೆ, ಸೂರ್ಯನಾಗಿರುವವರು ಈ ಶ್ರೀಮತ್ಸದ್ಗುರು ರಾಘವೇಂದ್ರರೆಂಬ ಗುರುಸಾರ್ವಭೌಮರು ನಿರಂತರವೂ ಮಂಗಲವನ್ನುಂಟುಮಾಡುತ್ತಿರಲಿ !

ಶ್ರೀ ರಾಮಮಾನಸರಾಗಿದ್ದು, ಶ್ರೀಮದ್ವೈಷ್ಣವಾಗ್ರೇಸರರಾಗಿರುವ, ನಮ್ಮೀ ಗುರುರಾಜರು, ಜ್ಞಾನಭಕ್ತಿತಪಃಪೂರ್ಣರಾಗಿರುತ್ತಾರೆ

ಕರ್ಮಂದೀಂದ್ರ ಸುಧೀಂದ್ರ ಸದ್ಗುರು ಕರಾಂಭೋಜೋದ್ಭವಃ
ಸಂತತಂ ।
ಪ್ರಾಜ್ಯಧ್ಯಾನ ವಶೀಕೃತಾಖಿಲ ಜಗದ್ವ್ಯಾಪ್ತಸ್ಯ ಲಕ್ಷ್ಮೀಧವಃ ।
ಸಚ್ಛಾಸ್ತ್ರಾತಿವಿದೂಷಕಾಖಿಲಮೃಷಾವಾದೀಭ ಕಂಠೀರವಃ ।
ಶ್ರೀಮತ್ಸದ್ಗುರು ರಾಘವೇಂದ್ರಯತಿರಾಟ್ ಕುರ್ಯಾತ್
ಧ್ರುವಂ ಮಂಗಲಂ ॥ ೭ ॥

ಸುಯತಿವೃಂದದೊಳಗೆ ಶ್ರೇಷ್ಠರಾದ ಶ್ರೀ ಗುರು ಸುಧೀಂದ್ರರಿಗೆ ಕರ ಕಮಲ ಸಂಜಾತರಾಗಿ ವರಪುತ್ರಕರಾದಂಥವರಾಗಿ ಸಂತತವೂ ಈ ಇಡೀ ಸೃಷ್ಟಿ ವನ್ನೆಲ್ಲಾ ವ್ಯಾಪಿಸಿ ನೆಲಸಿರುವಂಥ ಶ್ರೀ ಲಕ್ಷ್ಮೀಪತಿಯನ್ನೇ, ತಮ್ಮ ಆತ್ಯಂತಿಕ ಧ್ಯಾನಾಸಕ್ತಿಯಿಂದ, ಮೆಚ್ಚಿಸಿ ಒಲಿಸಿಕೊಂಡಿರುವವರು, ಶ್ರೀ ಹರಿಯನ್ನೇ ಸಾಕ್ಷಾತ್ಕರಿಸಿಕೊಂಡಂಥವರು, ಸತ್‌ಶಾಸ್ತ್ರಾದಿಗಳನ್ನು ಅಪಾರ್ಥವಮಾಡಿ ಕೊಂಡು, ಸುಳ್ಳು ತತ್ವಗಳನ್ನು ವಾದಿಸುತ್ತಿರುವ ಕುವಾದಿಗಳೆಂಬ ಮದಾನೆ ಗಳಿಗೆ, ಸಿಂಹದಂತಿದ್ದು, ಅವರ ಕುವಾದ ಕುತರ್ಕಗಳನ್ನೆಲ್ಲ ಭೇದಿಸುವಂಥ ಕೇಸರಿಯಾಗಿರುವವರು, ಇಂಥ ಈ ಶ್ರೀಮತ್ಸದ್ಗುರು ರಾಘವೇಂದ್ರರೆಂಬ ಗುರು ಸಾರ್ವಭೌಮರು ನಿಜವಾಗಿ ಸತತ ಮಂಗಲವನ್ನು ಮಾಡುತ್ತಿರಲಿ !

ಶ್ರೀ ವಿಜಯೀಂದ್ರ ಕರಕಮಲ ಸಂಜಾತರಾದ ಶ್ರೀಮತ್ಸುಧೀಂದ್ರ ಶ್ರೀಪಾದಂಗಳಿಗೆ ವರಕುಮಾರರಾಗಿ, ತಮ್ಮ ಆತ್ಯಂತಿಕ ಧ್ಯಾನಜಪತಪಾರಾಧನೆ ಗಳಿಂದ, ವಿಶ್ವಮಯನಾಗಿರುವ ಶ್ರೀ ವಾಸುದೇವನನ್ನೇ ಸಾಕ್ಷಾತ್ಕರಿಸಿಕೊಂಡು ಸಚ್ಛಾಸ್ತ್ರಗಳನ್ನೆಲ್ಲ ಕೆಡಿಸಿ, ಅಪಾರ್ಥ ವೈಪರೀತ್ಯಗಳಿಂದ, ವಾದಿಸುವ ಕುವಾದಿ ದುರ್ವಾದಿಗಳನ್ನೆಲ್ಲ ನುಂಗಿ, ನೀರು ಕುಡಿಯುವ ವಾದೀಭಸಿಂಹರೇ ಇವರು !

ಸಾಲಂಕಾರಕಕಾವ್ಯನಾಟಕಕಲಾಕಾಣಾದಪಾತಂಜಲ- ।
ತ್ರೈಯ್ಯರ್ಥ ಸ್ಮೃತಿಜೈಮಿನೀಯಕವಿತಾಸಂಗೀತಪಾರಂಗತಃ ।
ವಿಪ್ರಕ್ಷತ್ರವಿಡಂಘ್ರಿಜಾತಮುಖರಾನೇಕಪ್ರಜಾಸೇವಿತಃ ।
ಶ್ರೀಮತ್ಸದ್ಗುರುರಾಘವೇಂದ್ರ ಯತಿರಾಟ್ ಕುರ್ಯಾತ್
ಧ್ರುವಂ ಮಂಗಲಂ ॥ ॥೩॥

ಶ್ರೀ ಗುರುರಾಜರು ಸರ್ವವಿದ್ಯಾ ಪ್ರವೀಣರೂ, ಸರ್ವತಂತ್ರ ಸ್ವತಂತ್ರರೂ ಪ್ಪರಲ್ಲದೇ ಚಾತುರ್ವರ್ಣ್ಯ ಶ್ರೇಷ್ಠ ಪ್ರಜಾಜನರಿಂದ ಸದಾ ಸೇವಿಸಲ್ಪಡುರು

ಅಲಂಕಾರ, ಕಾವ್ಯ, ನಾಟಕ ( ೬೪ ) ಕಲೆಗಳಲ್ಲಿ, ಕಾಣ ಪಾತಂಜಲ ಹಾಗು ತ್ರಿವೇದ, ತ್ರೈವಿದ್ಯೆ, ಶ್ರುತಿಸ್ಮೃತಿ, ಜೈಮಿನೀ ( ಮೀಮಾಂಸೆ, ಉತ್ತರ ಪೂರ್ವ ) ಕವಿನಾ ಹಾಗು ಸಂಗೀತ ಆದಿ ಶಾಸ್ತ್ರಗಳಲ್ಲಿ, ಪಾರಂಗತರಾದವರು ಬ್ರಾಹ್ಮಣಕ್ಷತ್ರಿಯವೈಶ್ಯಶೂದ್ರಾದಿ ಚಾತುರ್ವರ್ಣ್ಯ ಪ್ರಮುಖ ಪ್ರಜಾಜನರಿಂದ ಸರ್ವತೋಪರಿ ಸೇವಿಸಲ್ಪಟ್ಟವರು, ಇಂಥ ಈ ಶ್ರೀಮತ್ಸದ್ಗುರು ರಾಘವೇಂದ್ರ ಗುರುಸಾರ್ವಭೌಮರು ಸದಾಮಂಗಲವನ್ನು ನೀಡುತ್ತಿರಲಿ !

ರಂಗೋತ್ತುಂಗತರಂಗಮಂಗಲಕರ ಶ್ರೀತುಂಗಭದ್ರಾತಟ- ।
ಪ್ರತ್ಯಸ್ಥದ್ವಿಜಪುಂಗವಾಲಯಲಸನ್ ಮಂತ್ರಾಲಯಾಖ್ಯೇ ಪುರೀ ।
ನವ್ಯೇಂದ್ರೋಪಲ ಭವ್ಯಕರ ಸದ್ವೃಂದಾವನಾಂತರ್ಗತಃ ।
ಶ್ರೀಮತ್ಸದ್ಗುರು ರಾಘವೇಂದ್ರಯತಿರಾಟ್ ಕುರ್ಯಾತ್
ಧ್ರುವಂ ಮಂಗಲಂ ॥ ೪ ॥

ರಮಣೀಯ ಹಾಗು ಉನ್ನತ ಊರ್ಮಿಗಳಿಂದ ಶೋಭಿಸುವ ತುಂಗ ಭದ್ರಾ ತೀರದಲ್ಲಿರುವ, ಶ್ರೇಷ್ಠ ಬ್ರಾಹ್ಮಣ ವಿದ್ವಾಂಸರ ತೇಜದಿಂದ ಬೆಳಗುತ್ತಿರುವ ಮಂತ್ರಾಲಯದಲ್ಲಿ ಹೊಸ ಮೀಸಲಾದ ಇಂದ್ರನೀಲ ಶಿಲೆಯಿಂದ ಸಿದ್ಧಗೊಳಿಸಲ್ಪಟ್ಟ ದಿವ್ಯಭವ್ಯ ವೃಂದಾವನವನ್ನು ಸಶರೀರರಾಗಿ ಪ್ರವೇಶಿಸಿದ ಅಗಾಧ ಮಹಿಮರು ನಮ್ಮೀ ಗುರುಗಳು ! ಈ ಶ್ರೀಮದ್ರಾಘವೇಂದ್ರ ಯತಿಪುಂಗವರು ಸದಾ ಮಂಗಲವನೀಯುತ್ತಿರಲಿ !

ವಿದ್ವದ್ರಾಜಶಿರಃಕಿರೀಟಖಚಿತಾನರ್ಘ್ಯೋರುರತ್ನಪ್ರಭಾ ।
ರಾಗಾಘೌಘಹಪಾದುಕದ್ವಯಚರಃ ಪದ್ಮಾಕ್ಷ ಮಾಲಾಧರಃ ।
ಭಾಸ್ವದ್ದಂಡಕಮಂಡಲೂಜ್ವಲಕರೋರಕ್ತಾಂಬರಾಡಂಬರಃ ।
ಶ್ರೀಮತ್ಸದ್ಗುರು ರಾಘವೇಂದ್ರಯತಿರಾಟ್ ಕುರ್ಯಾತ್
ಧ್ರುವಂ ಮಂಗಲಂ ॥ ೫ ॥

ಉದ್ದಂಡ ಪಂಡಿತ ಹಾಗು ಅನರ್ಘ್ಯ ರತ್ನಗಳ ಪ್ರಭೆಯಿಂದ ಮಿನುಗುತ್ತಿರುವ, ಶ್ರೇಷ್ಠ ಪಂಡಿತರಾದ ಮಹಾರಾಜರಿಗೂ ಪೂಜ್ಯರಾಗಿ ಅವರ ರಾಗಾದಿ ಪಾಪ ಪ್ರಪಂಚವನ್ನೆಲ್ಲ ತಮ್ಮ ಪಾವನ ಪಾದುಕೆಗಳಿಂದ ನಾಶಮಾಡುವಂಥವರು, ಕರಕಮಲಗಳೊಳಗೆ, ಕಮಲಾಕ್ಷ ಮಾಲೆ, ಹಾಗು ದಂಡಕಮಂಡಲು, ಹಾಗು ದಿವ್ಯ ಕಷಾಯವಸನದಿಂದಲೂ, ಭವ್ಯದೇದೀಪ್ಯಮಾನ ತೇಜಸ್ಸಿನಿಂದ ತೊಳಗುತ್ತಿರುವ, ಈ ಶ್ರೀಮದ್ರಾಘವೇಂದ್ರ ಗುರುಸಾರ್ವಭೌಮರು ನಿತ್ಯ ಮಂಗಲವನ್ನುಂಟುಮಾಡುತ್ತಿರಲಿ!

ಯತ್ ವೃಂದಾವನ ಸತ್ಪ್ರದಕ್ಷಿಣನಮಸ್ಕಾರಾಭಿಷೇಕಸ್ತುತಿ ।
ಧ್ಯಾನಾರಾಧನ ಮೃದ್ವಿಲೇಪನಮುಖಾನೇಕೋಪಚಾರಾನ್
ಸದಾ ।
ಕಾರಂಕಾರಂ ಅಭಿಪ್ರಯಾಂತಿ ಚತುರಾಲೋಕಾಃಪುಮರ್ಥಾನ್
ಸದಾ ।
ಶ್ರೀಮತ್ಸದ್ಗುರು ರಾಘವೇಂದ್ರಯತಿರಾಟ್ ಕುರ್ಯಾತ್
ಧ್ರುವಂ ಮಂಗಲಂ ॥ ೬ ॥

ಇವರ ಶ್ರೇಷ್ಠ ವೃಂದಾವನವನ್ನು, ಭಕ್ತಿಯುತರಾಗಿ, ಪ್ರದಕ್ಷಿಣೆ, ನಮಸ್ಕಾರ, ಅಭಿಷೇಕ, ಶ್ರೀಗುರುಸ್ತೋತ್ರ ಪಠನ, ಧ್ಯಾನ, ಆರಾಧನೆಗಳಿಂದ ಸೇವಿಸುತ್ತ, ಇವರ ವೃಂದಾವನ ಮೃತ್ತಿಗೆ, ನಿರ್ಮಾಲ್ಯ ಪಾದೋದಕಾದಿಗಳನ್ನು ಪದೇ ಪದೇ ಸೇವಿಸುತ್ತಿರುವಂತಹ ಭಕ್ತರಿಗೆ, ಧರ್ಮಾರ್ಥಕಾಮಮೋಕ್ಷಾದಿ ಚತುರ್ವಿದ ಪುರುಷಾರ್ಥಗಳನ್ನು ಸದಾ ನೀಡುತ್ತ, ಅನುಗ್ರಹಿಸುವಂಥ ಈ ಶ್ರೀಮದ್ರಾಘವೇಂದ್ರ ಗುರುಶ್ರೇಷ್ಠರು ಸದಾ ಮಂಗಲವನ್ನೀಯುತ್ತಿರಲಿ!

ವೇದವ್ಯಾಸಮುನೀಶಮಧ್ವಯತಿರಾಟ್ ಟೀಕಾರ್ಯ
ವಾಕ್ಯಾಮೃತಂ ।
ಜ್ಞಾತ್ವಾದ್ವೈತಮತಂ ಹಲಾಹಲ ಸಮಂ ತ್ಯಕ್ತ್ವಾ
ಸಮಾಖ್ಯಾಪ್ಯತೇ ।

ಸಂಖ್ಯಾವತ್ ಸುಖದಾಂ ದಶೋಪನಿಷದಾಂ ವ್ಯಾಖ್ಯಾಂ
ಸಮಾಖ್ಯಾನ್ ಮುದಾ ।
ಶ್ರೀಮತ್ಸದ್ಗುರು ರಾಘವೇಂದ್ರಯತಿರಾಟ್ ಕುರ್ಯಾತ್
ಧ್ರುವಂ ಮಂಗಲಂ ॥ ೭ ॥

ಶ್ರೀ ವೇದ ವ್ಯಾಸಮುನಿಗಳು, ಶ್ರೀಮಧ್ವಾಚಾರ್ಯರು, ಶ್ರೀ ಟೀಕಾಕೃತ್ಪಾದರು, ಮಾಡಿದ ಸಿದ್ಧಾಂತಗಳನ್ನೂ ಅವುಗಳ ವಾಕ್ಯಸೌರಭ ಅಮೃತವನ್ನೆಲ್ಲ ಓದಿ, ಅರ್ಥಮಾಡಿಕೊಂಡು, ಅರಗಿಸಿಕೊಂಡು, ದುಷ್ಟ ಅದ್ವೈತ ಮತವನ್ನು ಉರುಳಿಸಿ, ಖಂಡಿಸಿಬಿಟ್ಟು, ಒಳ್ಳೇ ಬುದ್ಧಿವತ್ತಾಗಿಯೂ, ಸುಸುಖವಾಗಿರುವ ರೀತಿಯಲ್ಲಿ, ದಶೋಪನಿಷದಾದಿಗಳನ್ನು, ಸುಲಲಿತವಾಗಿಯೂ, ಸುಂದರವಾಗಿಯೂ ರಚಿಸಿ, ಲೋಕಾನುಗ್ರಹಮಾಡಿ ಉಪಕಾರ ಕಟ್ಟಿಕೊಂಡಂಥ ಈ ಶ್ರೀಮದ್ರಾಘವೇಂದ್ರ ಗುರು ಸಾರ್ವಭೌಮರು ನಿರಂತರವೂ ಮಂಗಳವನ್ನು ನೀಡುತ್ತಿರಲಿ!

ಶ್ರೀಮದ್ವೈಷ್ಣವ ಲೋಕಜಾಲಕ ಗುರುಃ ಶ್ರೀಮತ್ಪರಿವ್ರಾಟ್ಗುರುಃ ।
ಶಾಸ್ತ್ರೇ ದೇವಗುರುಃ ಶ್ರಿತಾಮರತರುಃಪ್ರತ್ಯೂಹಗೋತ್ರಸ್ವರುಃ ।
ಚೇತೋಽತೀತಶಿರುಃ ತಥಾಜಿತವರುಃ ಸತ್ಸೌಖ್ಯ ಸಂಪತ್ಕರುಃ ।
ಶ್ರೀಮತ್ಸದ್ಗುರು ರಾಘವೇಂದ್ರಯತಿರಾಟ್ ಕುರ್ಯಾತ್
ಧ್ರುವಂ ಮಂಗಲಂ ॥ ೮ ॥

ಶ್ರೀಮದ್ವೈಷ್ಣವಾಗ್ರಣಿಗಳೂ, ಪರಮಹಂಸ ಮಹಾಶಯರೂ, ಶಾಸ್ತ್ರಾದಿ ವಿಷಯಗಳಲ್ಲಿ ಪಾರಂಗತರೂ, ಅಘಾದ್ರಿಸಂಭೇದನದೃಷ್ಟಿವಜ್ರರೂ ಅಂದರೆ, ಪಾಪಗಳೆಂಬ ಪರ್ವತಕ್ಕೆ ವಜ್ರಾಯುಧ ಸಮಾನರೂ, ಮನೋವಿಕಾರಾದಿಗಳಿಗೆಲ್ಲ ಮೀರಿದವರೂ, ಕುವಾದಿದಿಗ್ವಿಜಯಗಳೊಳಗೆಲ್ಲ ಅತ್ಯಂತ ಜಯಶಾಲಿಗಳೂ, ಭಕ್ತಾದಿಗಳಿಗೆಲ್ಲ ಸಂಪದಾದಿ ಅಭಿವೃದ್ಧಿಗಳನ್ನು ನೀಡಿ ಸತ್ಸುಖವನ್ನು ದಯಪಾಲಿಸುಂಥ ದಯಾಶೀಲರಾದ ಶ್ರೀಸದ್ಗುರು ರಾಘವೇಂದ್ರ ಯತೀಂದ್ರರು ಸದಾ ಸನ್ಮಂಗಲವನ್ನುಂಟುಮಾಡುತ್ತಿರಲಿ.

ಯಃಸಂಧ್ಯಾಸ್ವನಿಶಂ ಗುರೋರ್ವ್ರತಿಪತೇಃ ಸನ್ಮಂಗಲಸ್ಯ ಅಷ್ಟಕಂ ।
ಸದ್ಯಃಪಾಪಹರಂ ತ್ವಸೇವಿವಿದುಷಾಂ ಭಕ್ತ್ಯೈವ ಬಾಭಾಷಿತಂ ।

ಭಕ್ತ್ಯಾವಕ್ತಿ ಸುಸಂಪದಂ ಶುಭಪದಂ ದೀರ್ಘಾಯುರಾರೋಗ್ಯಕಂ।
ಕೀರ್ತಿಃಪುತ್ರಕಲತ್ರಬಾಂಧವಸುಹೃತ್ಮೂರ್ತಿಃ
ಪ್ರಯಾತಿ ಧ್ರುವಂ ॥ ೮ ॥

ತ್ರಿಕಾಲಗಳಲ್ಲಿ ನಿತ್ಯವೂ ಈ ಯತೀಶ್ವರರಾದ, ಶ್ರೀ ಗುರುರಾಜ ಸಾರ್ವಭೌಮರ ಈ ಮಂಗಲಕರವಾದ ಅಷ್ಟಕವನ್ನು ಭಕ್ತಿ ವಿಶ್ವಾಸಗಳಿಂದ, ಪಠಿಸುವವರಿಗೆ, ತತ್ಕಾಲದಲ್ಲಿ ಪಾಪ ಪರಿಹಾರ ಉಂಟಾಗುತ್ತದೆ ಹಾಗು ಶ್ರದ್ಧಾವಂತ ಭಕ್ತಜನರಿಗೆಲ್ಲ ಸತ್ಸಂಪತ್ತು ಮತ್ತು ಸತ್ಸೌಖ್ಯವನ್ನೂ, ಮಂಗಲಪದವನ್ನೂ ಧನಕನಾದಿ ಸಮೃದ್ಧಿ ದೀರ್ಘಾಯುರಾರೋಗ್ಯವನ್ನು ಮತ್ತು ಪುತ್ರ ಸುಹೃನ್ಮಿತ್ರಕಲತ್ರಬಂಧುಬಳಗವನ್ನು ಕೊಟ್ಟು ಈ ಕರುಣಾಮಯರಾದ ಗುರುರಾಜರು, ನಿಜವಾದ ಸತ್ಕೀರ್ತಿಯನ್ನು ಕೊಟ್ಟು, ಕಾಪಾಡುತ್ತಿರುವವರಲ್ಲ ಸಂದೇಹವಿಲ್ಲೆಂದು, ಶ್ರೀ ರಾಯರ ಪರಮಶಿಷ್ಯರಾದ ಶ್ರೀ ಅಪ್ಪಣ್ಣಾಚಾರ್ಯರು ಈ ಗುರುರಾಜಾಷ್ಟಕದಲ್ಲಿ ಶ್ರೀ ಗುರುರಾಜರ ಮಹಿಮೆಯ ಗುಣಗಾಯನಮಾಡಿ ಹಾಡಿ ಕೊಂಡಾಡಿದ್ದಾರೆ

ಜಯತು ಜಯತು ರಾಜಾ
ರಾಜರಾಜಾದಿ ಪೂಜ್ಯೋ ।
ಜಯತು ಜಯತು ರಮ್ಯೋ ।
ರಂಜಿತಾನೇಕಲೋಕಃ ॥
ಜಯತು ಜಯತು ಭೋಗೀ ।
ಭಕ್ತಭಾಗ್ಯ ಪ್ರದಾತಾ ।
ಜಯತು ಜಯತು ಭೂಮಾ ।
ಭೂರಿ ಭೂರಿ ಪ್ರದಾತಾ ॥

